# ಗಂಗಾವತಿ ತಾಲೂಕಿನ ಶಾಸನಗಳು

## ಸಮಾಜೋಧಾರ್ಮಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಪ್ರಬಂಧ


ಸಂಶೋಧನ ವಿದ್ಯಾರ್ಥಿ

ಬಿ.ವೆಂಕಟೇಶ

ಮಾರ್ಗದರ್ಶಕರು

ಡಾ.ಕಲವೀರ ಮನ್ವಾಚಾರ್

ಪ್ರವಾಚಕರು

ಶಾಸನಶಾಸ್ತ್ರ ವಿಭಾಗ






ಸಮಾಜ ವಿಜ್ಞಾನಗಳ ನಿಕಾಯ

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಗಂಗಾವತಿ ತಾಲೂಕಿನ ಶಾಸನಗಳು

# ಸಮಾಜೋಧಾರ್ಮಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಪ್ರಬಂಧ

ಸಂಶೋಧನ ವಿದ್ಯಾರ್ಥಿ

**ಬಿ.ವೆಂಕಟೇಶ**



ಮಾರ್ಗದರ್ಶಕರು

**ಡಾ.ಕಲವೀರ ಮನ್ವಾಚಾರ್**

ಪ್ರವಾಚಕರು

ಶಾಸನಶಾಸ್ತ್ರ ವಿಭಾಗ



ಸಮಾಜ ವಿಜ್ಞಾನಗಳ ನಿಕಾಯ

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಪ್ರಮಾಣ ಪತ್ರ

ಗಂಗಾವತಿ ತಾಲೂಕಿನ ಶಾಸನಗಳು ಸಮಾಜೋಧಾರ್ಮಿಕ ಅಧ್ಯಯನ ಕುರಿತ ಈ ಪ್ರಬಂಧವನ್ನು ಬಿ.ವೆಂಕಟೇಶ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದು ಇಡಿಯಾಗಿ ಇಲ್ಲವೆ ಬಿಡಿಯಾಗಿ ಯಾವುದೇ ಪದವಿಗಾಗಿ ಸಲ್ಲಿಸಲ್ಪಟ್ಟಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಡಾ.ಕಲವೀರ ಮನ್ವಾಚಾರ್ ಎಂ.ಎ, ಪಿ.ಎಚ್‌ಡಿ
ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 27-08-07
ಸ್ಥಳ : ವಿದ್ಯಾರಣ್ಯ

# ದೃಢೀಕರಣ ಪತ್ರ

ಗಂಗಾವತಿ ತಾಲೂಕಿನ ಶಾಸನಗಳು ಸಮಾಜೋಧಾರ್ಮಿಕ ಅಧ್ಯಯನ ಕುರಿತ ಈ ಪ್ರಬಂಧವನ್ನು ನಾನು ಡಾ.ಕಲವೀರ ಮನ್ವಾಚಾರ್ ಪ್ರಾಧ್ಯಾಪಕರು ಶಾಸನಶಾಸ್ತ್ರ ವಿಭಾಗ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು ಈ ಪ್ರಬಂಧವನ್ನು ಯಾವುದೇ ಪದವಿಗಾಗಿ ಈ ಮೊದಲು ಎಲ್ಲಿಯೂ ಸಾದರಪಡಿಸಿಲ್ಲವೆಂದು ಪ್ರಮಾಣೀಕರಿಸುತ್ತಿದ್ದೇನೆ.

ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ ಕುಲಸಚಿವರು (ಮೌಲ್ಯಮಾಪನ) ಇವರಿಗೆ ಶಾಸನಶಾಸ್ತ್ರ ವಿಭಾಗ ೨೦೦೬-೦೭ ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ್ದೇನೆ.

ಬಿ.ವೆಂಕಟೇಶ
ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 27-08-07
ಸ್ಥಳ : ವಿದ್ಯಾರಣ್ಯ

## ಪರಿವಿಡಿ

ಅಧ್ಯಾಯ ಏಳು



ಅಧ್ಯಾಯ ಎಂಟು

# ಅಧ್ಯಾಯ ಒಂದು

## ಉದ್ದೇಶ ಮತ್ತು ವ್ಯಾಪ್ತಿ

### ಪೀಠಿಕೆ

ಉನ್ನತವಾದ ಪರಂಪರೆ ಹೊಂದಿದ ಒಂದು ದೇಶಕ್ಕೆ ಉದಾತ್ತವಾದ ಚರಿತ್ರೆ ಇದ್ದೆ ಇತರುತ್ತದೆ. ಅಂದ ಮೇಲೆ ಆ ರಾಷ್ಟ್ರದ ಪ್ರತಿಯೊಂದು ಭಾಗಗಳಿಗೆ ತಮ್ಮದೇ ಆದಾ ವಿಶಿಷ್ಟ ಗುಣಲಕ್ಷಣ ಉಜ್ವಲ ಚರಿತ್ರೆ ಇರುವುದು ಸಹಜ ಈ ರೀತಿ ಎಲ್ಲಾ ದೇಶದ ಭಾಗಗಳ ಸಾಂಸ್ಕೃತಿಕ ಸಂಪತ್ತು ಕೇಂದ್ರಕೃತವಾದಾಗ ಮಾತ್ರ ಆ ದೇಶ ಶ್ರೇಷ್ಠ ಪರಂಪರೆಯ ಪ್ರತೀಕವಾಗಿ ಗೋಚರಿಸುತ್ತದೆ.

ಭಾರತ ದೇಶದ ಕೂಡ ಅಂತ ಭೌವ್ಯ ಪರಂಪರೆಯನ್ನು ಹೊಂದಿದ ದೇಶ ಅದಕ್ಕೆ ಪೂರಕವಾಗಿ ಕನ್ನಡ ನಾಡು ಕೂಡ ತನ್ನ ಭೌಗೋಳಿಕ, ಚಾರಿತ್ರಿಕ, ಹಿರಿಮೆ ಸಾಮಾಜಿಕ, ಧಾರ್ಮಿಕ ಮತ್ತು ಕಲಾತ್ಮಕ ಸಂಗತಿಗಳಿಂದಾಗಿ ವಿಶಿಷ್ಟ ಸಂಸ್ಕೃತಿ ನೆಲೆಯಾಗಿದೆ. ಒಂದು ಪ್ರದೇಶದ ಶಾಸನ ಇತಿಹಾಸ ಮತ್ತು ಒಂದು ಗ್ರಾಮದ ಚರಿತ್ರೆ, ವ್ಯಾಪ್ತಿ ಕಿರಿದಾದದ್ದು ಆದರೆ ಒಂದು ರಾಷ್ಟ್ರದ ಅಥವಾ ನಾಡಿನ ವ್ಯಾಪ್ತಿ ವಿಸ್ತಾರವಾಗಿದೆ ಇದಲ್ಲಾ ಸಹಜವಾಗಿರುವಂತದು ಇದರಿಂದ ಪ್ರಾದೇಶಿಕ ಶಾಸನಗಳ ಮಹತ್ವವನ್ನು ಕುಂದುಕೊರತೆಗಳಿಲ್ಲಾ ಪ್ರಧಾನವಾಗಿಯೂ ಗೌಣವಾಗಿಯೂ ರಾಷ್ಟ್ರ ನಾಡುಗಳ ಚರಿತ್ರೆಗಳ ಸಾರ್ಥಕಕ್ಕೆ ಪ್ರಾದೇಶಿಕ ಇತಿಹಾಸವು ಪೂರಕವಿದೆ. ಅದರ ಮೂಲ ಘಟಕ

ಇಂಥ ಇತಿಹಾಸವನ್ನು ಒಳಗೊಂಡ ಕರ್ನಾಟಕದಲ್ಲಿ ಶಾಸನಗಳ ಸಮೃದ್ಧಿ ಕೊರತೆ ಇಲ್ಲ. ಕರ್ನಾಟಕವನ್ನು ಆಳಿದ ಅರಸು ಮನೆತನಗಳು ಅನೇಕ ಧರ್ಮ ಮತ್ತು ಕಲೆ ವಾಸ್ತು ಶಿಲ್ಪ ಶಾಸನಗಳ ಕೊಡುಗೆ ಅಪಾರವಾದದ್ದು ಇಲ್ಲಿ ಶಾಸನಗಳು ವಾಸ್ತು ಶಿಲ್ಪಗಳೆರಡು ಧರ್ಮದ ತಳದಿಯ ಮೇಲೆ ಬೆಳೆದುಬಂದಿದೆ ಎಂದು ಎಂದರೆ ತಪ್ಪಾಗಲಾರದು.

ಕರ್ನಾಟಕ ರಾಜಕೀಯ ಸಾಂಸ್ಕೃತಿಕ ಹಿರಿಮೆಯನ್ನು ಹೊತ್ತು ನಿಂತ ಹಲವು ಪ್ರಮುಕ ಸಾಮ್ರಾಜ್ಯಗಳಲ್ಲಿ ಪ್ರಾಚೀನ ಕಾಲದ ಮೌರ್ಯರು ಕಲ್ಯಾಣ ಚಾಲುಕ್ಯರು ವಿಜಯನಗರ ಸಾಮ್ರಾಜ್ಯ ಮತ್ತು ಕನಕಗಿರಿ ಪಾಳೆಗಾರರು ಗಂಗಾವತಿ ತಾಲೂಕಿನ ಸುತ್ತಮುತ್ತಲಿನ ಪ್ರದೇಶಗಳು ಸೇರಿದೆ. ಕದಂಬ ಮಯೂರ ಶರ್ಮ ಮಲಪ್ರಭಾ ತನ್ನ ಪ್ರಬುತ್ವವನ್ನು ಸ್ಥಾಪಿಸಿದ್ದು ಗಂಗರ ಶಾಸನ ತಾಲೂಕಿನ ಹೆಬ್ಬಾಳ ಗ್ರಾಮದಲ್ಲಿ ದೊರೆತು ಚಾಲುಕ್ಯ ಪುಲಿಕೇಶಿಯ ಸಮಗ್ರ ದಕ್ಷಿಣ ಪತದ ಅರಸನಾಗಿದ್ದು ರಾಷ್ಟ್ರಕೂಟ ೨ನೆಯ ಜಗತುಂಗ ೨ನೆಯ (ಕೃಷ್ಣನ ಮಗ) ಎಡ ದೊರೆ (ಕೃಷ್ಣ ನದಿಗಳ ನಡುವಿನ ಪ್ರದೇಶ) ನಾಡನ್ನು ಆಳಿದ್ದು ಇದಕ್ಕೆ ಸಾಕ್ಷಿಯಾಗಿಯೂ ರಾಷ್ಟ್ರಕೂಟ ಬಾದಾಮಿ ಚಾಲುಕ್ಯರ ಶಾಸನಗಳು ಇತ್ತೀಚೆಗೆ ಬುದಗೂಂಪ ಹಾಗೂ ಆಗೋಲಿ ಗ್ರಾಮದಲ್ಲಿ ಬೆಳಕಿಗೆ ಬಂದಿದೆ. (ಕ್ರಿ.ಶ. ೯೭೩ರಲ್ಲಿ) ಕಲ್ಯಾಣ ಚಾಲುಕ್ಯರು ರಾಷ್ಟ್ರಕೂಟರನ್ನು ಅತ್ತಿಕ್ಕಿ ಅಧಿಕಾರಕ್ಕೆ ಬರಲು ಗಂಗಾವತಿ ತಾಲೂಕು ಸಂಪೂರ್ಣ ಅವರ ಆಧೀನಕ್ಕೆ ಸೇರುತ್ತದೆ.

**ಉದ್ದೇಶ ಮತ್ತು ವ್ಯಾಪ್ತಿ :**

ಶಾಸನ ನಿರ್ಮಾಣಕ್ಕೆ ಮುಖ್ಯ ಕಾರಣ ರಾಜಕೀಯ ಇತಿಹಾಸ, ಧರ್ಮದ ಕಲ್ಪನೆ ಮೂಡುವುದರೊಂದಿಗೆ ಶಾಸನ ಉಗಮವಾಗಿತ್ತು. ಶಾಸನವು ಧರ್ಮದ ಸಿದ್ಧಾಂತಗಳಿಗೆ ಕಟ್ಟುಬಿದ್ದು ವಿಶಿಷ್ಟ ರೀತಿಯಲ್ಲಿ ಬೆಳವಣಿಗೆ ಹೊಂದಿತ್ತು. ವಾಸ್ತುಶಿಲ್ಪ ರಚನೆ ಗ್ರಂಥಗಳ ರಚನೆಯ ಶಾಸನಗಳಲ್ಲಿ ಕಟ್ಟುಪಾಡುಗಳು ರಾಜರು ಧಾರ್ಮಿಕ ಕಲ್ಯಾಣ ಸಾಮಾಜಿಕ ಧರ್ಮದ ಪ್ರಜ್ಞೆ ಸೌಂದರ್ಯಗಳಿಗೆ ಅನುಸಾರವಾಗಿ ಶಾಸನ ರಚಿಸಿದರು. ಶಾಸನಗಳನ್ನು ತಮ್ಮ ಜೀವನದ ಆರ್ಥಿಕ ಸಾಮಾಜಿಕ ಧಾರ್ಮಿಕ ಸಾಧನವಾಗಿ ತಿಳಿಸುತ್ತದೆ.

ಯಾವುದೇ ಕ್ಷೇತ್ರವು ಪ್ರಾದೇಶಿಕವಾಗಿ ವಿಸ್ತಾರವಾಗಿರಲಿ ಅಥವಾ ಚಿಕ್ಕದಾಗಿರಲಿ ಆಯಾ ಪ್ರದೇಶದಲ್ಲಿ ವಿಭಿನ್ನ ಶಾಸನಗಳು ರಚನೆಗೊಂಡವು. ಸಾಮಾಜಿಕ, ಧಾರ್ಮಿಕ, ಆರ್ಥಿಕ ಸಂಪ್ರದಾಯಗಳಲ್ಲಿ ವಿವಿಧ ಅಂಶಗಳನ್ನು ಅವಲಂಭಿಸಿ ಬೆಳೆದುಬಂದ ಬಗ್ಗೆ ಅನುಸರಿಸುತ್ತಿದ್ದ ಸಿದ್ಧತೆಗಳು ಕುರಿತು ಅಧ್ಯಯನ ನಡೆಸಿ ಮಾಹಿತಿ ಸಂಗ್ರಹಿಸುವುದರ ಜೊತೆಗೆ ಕ್ಷೇತ್ರಾಧ್ಯಯನದ ವರದಿಯನ್ನಾಧರಿಸಿ ಅಲ್ಲಿನ ಪುರಾತತ್ವ ಮತ್ತು ಶಾಸನ ಮೂರ್ತಿಶಿಲ್ಪ ದೇವಾಲಯಗಳು ಕುರಿತು ವರದಿ ರಚಿಸುವುದು ಮೂಲ ಉದ್ದೇಶವಾಗಿದೆ. ನಮಗೆ ದೊರೆತ ಆಕರಗಳನ್ನು ಆಧಾರವಾಗಿಟ್ಟುಕೊಂಡು ಪ್ರಾದೇಶಿಕ ವಿಷಯ ಪೋಷಕನ ಶ್ರೀಮಂತಿಕೆ ಅಲ್ಲಿನ ನೈಪುಣ್ಯತೆ ಹಾಗೂ ಇತರೆ ಪ್ರಭಾವಗಳನ್ನು ಅರಿಯುವುದು ಕೂಡ ಮೂಲ ಉದ್ದೇಶಗಳಲ್ಲಿ ಸೇರಿದೆ.

ಕರ್ನಾಟಕದ ಹಿರಿಮೆಯನ್ನು ಎತ್ತಿ ಹಿಡಿದ ಗಂಗಾವತಿ ತಾಲೂಕಿನ ತಕ್ಕಮಟ್ಟಿಗೆ ಶರಣಬಸಪ್ಪ ಪಿ ಅವರು ಕನಕಗಿರಿ ದೇವಾಲಯ ವಾಸ್ತುಶಿಲ್ಪ ಬಗ್ಗೆ ಅಧ್ಯಯನ ಮಾಡಿದ್ದಾರೆ. ಆದರೆ ಒಡಿಯಾಗಿ ಶಾಸನಗಳ ಬಗ್ಗೆ ಗಮನಾರ್ಹವಾದ ಅಧ್ಯಯನವೇ ಆಗಿಲ್ಲವೆಂದು ಹೇಳಬಹುದು. ಇಂಥ ಗಂಗಾವತಿ ತಾಲೂಕು ಆಯಾ ಪ್ರದೇಶದ ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಿಗೆ ಶಾಸನಗಳ ಮುಖ್ಯ ಕೊಡುಗೆ ನೀಡಿದೆ ಅಂತಹ ಶಾಸನಗಳ ಬಗ್ಗೆ ಸಂಶೋಧನೆ ರಾಜ್ಯಗಳ ಇತಿಹಾಸ ಮತ್ತು ಅವುಗಳ ಸಾಮಾಜಿಕ ವಿಷಯ ಕೊಡುಗೆಯನ್ನು ಸಮಗ್ರವಾಗಿ ಅಧ್ಯಯನವಾಗಬೇಕಾಗುತ್ತದೆ.

ಕ್ರಿ.ಶ. ೧೯೩೫ರಲ್ಲಿ ಬ್ರಿಟಿಷ್ ಅಧಿಗಾ ಲಿಯೋನಾರ್ಡ್‌ಮನ್ ಹಿರೇಬೆಣಕಲ್ಲಿನ ಗುಡ್ಡದಲ್ಲಿ ಗವಿವರ್ಣ ಚಿತ್ರಗಳನ್ನು ಶೋಧಿಸಿ ಇವುಗಳ ಬಗ್ಗೆ ಒಂದು ಟಿಪ್ಪಣಿಯನ್ನು ಪುರಾತತ್ವ ಇಲಾಖೆಯಲ್ಲಿ ಪ್ರಕಟಿಸಿದ್ದಾನೆ.

ಕ್ರಿ.ಶ. ೧೯೭೫ರಲ್ಲಿ ಡಾ.ಅ.ಸುಂದರರವರು ಗಂಗಾವತಿ ತಾಲೂಕಿನ ಪ್ರಾಚ್ಯವಸ್ತುಗಳ ಅನ್ವೇಷಣೆ ಮತ್ತು ಅಧ್ಯಯನದ ವರದಿಯ ಪ್ರಕಟವಾಗಿದೆ. ಗಂಗಾವತಿ ತಾಲೂಕಿನ ಮಲ್ಲಾಪುರದಲ್ಲಿ ಬಯಲು ಬಂಡೆಯ ವರ್ಣಚಿತ್ರಗಳು ಬೆಳಕಿಗೆ ಬಂದಿದೆ. ಗಂಗಾವತಿ ತಾಲೂಕಿನಲ್ಲಿ ದೇವಾಲಯ ವಾಸ್ತುಶಿಲ್ಪ ಶಿಲಾಯುಗದ ವರ್ಣಚಿತ್ರಗಳ ಬಗ್ಗೆ ಕ್ಷೇತ್ರಕಾರ್ಯ ಆಗಿದೆ. ಆದರೆ ಶಾಸನಗಳ ಬಗ್ಗೆ ಕ್ಷೇತ್ರಕಾರ್ಯ ಆಗಿದೆ. ಅದರಲ್ಲೂ ಸಾಮಾಜೋಧಾರ ಶಾಸನಗಳ ಬಗ್ಗೆ ಕ್ಷೇತ್ರಕಾರ್ಯ ಆಗಿಲ್ಲ ಅದನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಮಾಡುವುದೇ ನನ್ನ ಉದ್ದೇಶ.

**ಗಂಗರ ಶಾಸನ :**

ಗಂಗಾವತಿ ತಾಲೂಕಿನಲ್ಲಿ ಇಲ್ಲಿಯವರೆಗೆ ಬೆಳಕಿಗೆ ಬಂದಿರುವ ಶಾಸನಗಳಲ್ಲಿ ಗಂಗರ ಕಾಲದ ೧೦ನೆಯ ಶತಮಾನದ ಶಾಸನವೇ ಪ್ರಾಚೀನವಾದದ್ದು ತಾಲೂಕಿನ ಶಾಸನಗಳ ಅನ್ವೇಷಣೆ ಮತ್ತು ಅಧ್ಯಯನ ಸಂಪೂರ್ಣವಾಗಿಲ್ಲವಾದ್ದರಿಂದ ಇದಕ್ಕೂ ಪ್ರಾಚೀನ ಶಾಸನಗಳ ಇರುವ ಸಾಧ್ಯತೆಗಳು ಇವೆ. ಉದಾಹರಣೆಗೆ ಹೆಬ್ಬಾಳಿನ ಸೋಮೇಶ್ವರ ದೇವಾಲಯದಲ್ಲಿರುವ ೧೦ನೆಯ ಶತಮಾನದ ಶಾಸನ. ಇವೆ ಇದು ತಲಕಾಡಿನ ಗಂಗರ ಶಾಸನವಾಗಿದೆ.

**ವ್ಯಾಪ್ತಿ :**

ಚಾಲುಕ್ಯರ ದಾನಶಾಸನ ಚಾಲುಕ್ಯರ ೧ನೆಯ ಸೋಮೇಶ್ವರನು ಕ್ರಿ.ಶ. ೧೦೫೬ರ ಈ ಶಾಸನವು ಅರಸನು ಮುಸುತೆವೆಂಬ ಹಳ್ಳಿಯನ್ನು ದಾನ ಮಾಡಿದ್ದನು. ವಿಪ್ರುನಾರಾಯಣ ಊರಿನಲ್ಲಿಯ ೨ ಮತ್ತೆರ ಭೂಮಿಯನ್ನು ಮತ್ತು ೫ ಗದ್ಯಾಣವನ್ನು ದೇವರ ಪೂಜೆಗಾಗಿ ದಾನಮಾಡಿದನು.

ಚಾಲುಕ್ಯ ಅರಸ ಅಹಮಮಲ್ಲ ತನ್ನ ಮಹಾಮಂತ್ರಿ ಮಣ್ಣಮಯ್ಯನಿಗೆ ಭೂದಾನ ಮಾಡಿದ ಉಲ್ಲೇಖ ಪಂಪಾಸರೋವರ ಬಳಿ ಇರುವ ಶಾಸನದಲ್ಲಿದೆ.

**ವಿಜಯನಗರ ಶಾಸನಗಳು :**

ಶೈವ ಮತ್ತು ವೈಷ್ಣವ ಧರ್ಮಗಳ ಕೆಲವು ವಿವರಗಳು ಸಹ ಇಲ್ಲಿಯ ದೇವರಾಯನ ಕಾಲದಲ್ಲಿ ಕ್ರಿ.ಶ. ೧೪೩೭ರಲ್ಲಿ ಭೈರವ ದೇರ ದೇವಾಲಯದ ನಿರ್ಮಾಣವಾಯಿತು. ಕಪಿಲೇಶ್ವರ ೨ನೆಯ ಕಪಿಲೇಶ್ವರ, ಬಸವರಾಜ, ಅಮರೇಶ್ವರ, ಮಹೇಶ. ತಿರುರಂಗನಾಥ ಮತ್ತು ಹನುಮಂತ ಮುಂತಾದ ದೇವರಿಗೆ ದಾನಗಳನ್ನು ಕೊಡಲಾಯಿತು. ಇನ್ನೊಂದು ಶಾಸನ ಸದಾಶಿವರಾಯನ ಆಳ್ವಿಕೆಯಲ್ಲಿ ಕ್ರಿ.ಶ. ೧೫೫೬ರಲ್ಲಿ ಆನೆಗೊಂದಿಯ ಹೊಳೆಯ ೧೪ ಜನ ಹೊಳೆಯ ಬೋವರು ಮತ್ತು ಅಂಬಲಿಯ ಮಹಾಲಿಂಗ ಒಡೆಯರಿಗೆ ಧರ್ಮವನ್ನು ಕೊಟ್ಟರು ಅದೇ ವರ್ಷ ಅಂಬಿಗನ ಮುಖ್ಯಸ್ಥರು ನಾಗಬೋಗಿ ಮತ್ತು ಬಸವಬೋಗಿಗೆ ಭೂಮಿಯನ್ನು ದಾನ ಮಾಡಿದನು.

ಕನಕಗಿರಿ ಗಂಗಾವತಿ ತಾಲೂಕಿನ ಮತ್ತೊಂದು ಐತಿಹಾಸಿಕ ಪ್ರಸಿದ್ಧ ಸ್ಥಳ ಇಲ್ಲಿಯ ಅಧಿದೇವತೆ ಕನಕಾಚಲ ಸೀತಾ ಲಕ್ಷ್ಮೀನರಸಿಂಹ ಈ ದೇವಾಲಯವು ವಿಜಯನಗರದ ಕಾಲದಲ್ಲಿ ಶಾಸನಗಳಿಂದ ವಿಜಯನಗರದ ಅರಸ ದೇವರಾಯನು ಕ್ರಿ.ಶ. ೧೬೩೬ರಲ್ಲಿ ದೇವರ ಅಮೃತಪಡಿ ಮುಂತಾದ ಪೂಜೆಗಳಾಗಿ ಕನಕಗಿರಿ ಪೇಟೆಯನ್ನು ದಾನವಾಗಿ ಕೊಟ್ಟನು.

ಕ್ರಿ.ಶ. ೧೪೮೮ರಲ್ಲಿ ನರಸಿಂಹ ಅರಸ ಗೋಮರಹಳ್ಳಿ ಮತ್ತು ಖೇಡರಹಳ್ಳಿಗಳನ್ನು ಇದೇ ದೇವರ ಪೂಜೆಗಾಗಿ ದಾನ ಮಾಡಿದನು.

**ಧಾರ್ಮಿಕ ಹಿನ್ನೆಲೆ :**

ಒಂದು ಕಾಡಿನ ಜೀವಂತಿಕೆಯು ಸಾಕ್ಷಿ ಅಲ್ಲಿ ಬಾಳಿ ಬೆಳಿಗಿನ ಧರ್ಮಗಳು ಸರ್ವಧರ್ಮ ಆಡುಂಬೋಲ ಎನಿಸಿಕೊಂಡು ಕರ್ನಾಟಕದ ಒಂದು ಪ್ರದೇಶವಾದ ಗಂಗಾವತಿ ತಾಲೂಕಿನ ಚತುರಾಷ್ಟ್ರ ಕೋಟೆ ಪ್ರಾಚೀನ ಕಾಲದಿಂದಲೂ ಹಲವು ಹತ್ತು ಧರ್ಮಗಳು ನೆಲೆ ಬೀಡಾಗಿತ್ತು. ಇಲ್ಲಿ ಬಾಳಿ ಬೆಳಗಿದ ಧರ್ಮಗಳ ಸತ್ಯ ಕಥೆಯನ್ನು ಚಿತ್ತರಿಸುವ ಧಾರ್ಮಿಕ ಅವಶೇಷಗಳಿವೆ. ಧರ್ಮ ಜೊತೆಗೆ ತೈಲ ಎನ್ನುವುದು.

**ಜೈನಧರ್ಮ :**

ಕುಮ್ಮಟದುರ್ಗ ಆನೆಗೊಂದಿ ಜೈನಧರ್ಮ ಗಂಗಾವತಿ ತಾಲೂಕಿನಲ್ಲಿ ೭ನೆಯ ಶತಮಾನದವರೆಗೆ ಜೈನಧರ್ಮ ಪವಿತ್ರ ಪರಮ ಪಾವನ ಕ್ಷೇತ್ರವಾಗಿತ್ತು.

ಅಷ್ಟೇ ಅಲ್ಲದೇ ಶೈವ ವೈಷ್ಣವ ಧರ್ಮವೂ ಕೂಡ ಗಂಗಾವತಿ ತಾಲೂಕಿಲ್ಲಿ ಪ್ರಚಾವಾಗಿತ್ತು.

# ಅಧ್ಯಾಯ ಎರಡು

## ಇತಿಹಾಸ ಪೂರ್ವಕಾಲ

ಗಂಗಾವತಿ ಪ್ರದೇಶವು ಸಾಂಸ್ಕೃತಿಕವಾಗಿ ಭೌಗೋಳಿಕವಾಗಿ ಸಶಕ್ತವಾಗಿ ದಖ್ಖನ್ ಪ್ರಸ್ಥಭೂಮಿಯಲ್ಲಿದೆ. ಈ ಪ್ರದೇಶವು ಪ್ರಾಚೀನ ಮಾನವನ ಚಟುವಟಿಕೆಗಳಿಗೆ ಪೂರಕವಾದ್ದರಿಂದ ಇದು ಆ ಕಾಲದ ಮಾನವನ ವಾಸ್ತವ್ಯದ ಪ್ರಮುಖ ಸ್ಥಳವಾಗಿತ್ತೆಂದು ಊಹಿಸಬಹುದು. ಗಂಗಾವತಿಯ ದಕ್ಷಿಣ ಮತ್ತು ಉತ್ತರದಲ್ಲಿ ಕ್ರಮವಾಗಿ ತುಂಗಭದ್ರಾ ಮತ್ತು ಕೃಷ್ಣಾನದಿಯು ಪಶ್ಚಿಮದಿಂದ ಪೂರ್ವಾಭಿಮುವಾಗಿ ಹರಿಯುತ್ತಿದೆ. ಆದ್ದರಿಂದ ಈ ಪ್ರದೇಶದಲ್ಲಿ ಸುಮಾರು ೧೮೪೨ ರಿಂದ ಪ್ರಾಗಿತಿಹಾಸ ಕಾಲದ ಮಾನವನ ವಸ್ತು ಅವಶೇಷಗಳು ಹೆಚ್ಚಾಗಿ ಶೋಧವಾಗಿದೆ. ಗಂಗಾವತಿಯ ಉತ್ತರಕ್ಕೆ ಸುಮಾರು ೪೦ ಕಿ.ಮೀ. ದೂರದಲ್ಲಿ ಅಂಗಸಗೂರಿನ ಬಳಿ ಒಬ್ಬ ಇಂಗ್ಲಿಷ್ ಅಧಿಕಾರಿಯು ೧೧೬೯ರಲ್ಲಿ ತನ್ನ ಮನೆಯ ಹಿಂದಿನ ತೋಟದಲ್ಲಿ ಅಗೆಯುತ್ತಿರುವಾಗ ಕೆಲವು ಕಲ್ಲಿನ ಚಕ್ಕೆಗಳು ದೊರೆತವು. (ಅಲ್ಚಿನ್ ಎಫ್.ಆರ್ ೧೯೬೦) ಈ ಕಲ್ಲಿನ ಚಕ್ಕೆಗಳನ್ನು ಪರೀಕ್ಷಿಸಿಲಾಗಿ ಅವುಗಳು ಮಾನವ ನಿರ್ಮಿತ ಉಪಕರಣಗಳಿರಬೇಕೆಂದು ತರ್ಕಿಸಲಾಗಿದೆ. ಇದರಂತೆಯೇ ಲಿಂಗಸೂರಿನ ಆನತಿ ದೂರದಲ್ಲಿರುವ ಎಡಹಳ್ಳಿ (ಸುರಪುರ ತಾ. ಗುಲ್ಬರ್ಗಾ ಜಿಲ್ಲೆ)ಯಲ್ಲಿ ಒಬ್ಬ ಭೂಗರ್ಭ ಶಾಸ್ತ್ರಜ್ಞರು ಈ ಶತಮಾನದ ಆದಿದಶಕದಲ್ಲಿ ಆದಿಹಳೆಯ ಶಿಲಾಯುಗ ಸಂಸ್ಕೃತಿಯ ಕಲ್ಲಿನ ಉಪಕರಣಗಳನ್ನು ಸಂಗ್ರಹಿಸಿದರು. (ಪದ್ದಯ್ಯ ಕ. ೧೯೮೨-೩೩) ಈ ಕಲ್ಲಿನ ಉಪಕರಣಗಳನ್ನು ಆ ಪ್ರದೇಶದಲ್ಲಿ ದೊರೆಯುವ ಸುಣ್ಣದ ಕಲ್ಲಿನಲ್ಲಿ ಮಾಡಿದವುಗಳಾಗಿದ್ದವು. ೧೯೬೫ರ ಸಮಯದಲ್ಲಿ ಪುಣೆಯ ಡೆಕ್ಕನ್ ಕಾಲೇಜ್ ಪೋಸ್ಟ್ ಗ್ರ್ಯಾಜುಯೇಟ್ ಆ್ಯಂಡ್ ರಿಸರ್ಚ್ ಇನ್ಸ್ಟಿಟ್ಯೂಟ್‌ನ ಪುರಾತತ್ವ ಶಾಸ್ತ್ರ ವಿಭಾಗದ ಝಡ್.ಡಿ.ಅನ್ಸಾರಿಯವರು ತುಂಗಭದ್ರಾ ನದಿ ದಂಡೆಯಲ್ಲಿರುವ ನಿಟ್ಟೂರಿನಲ್ಲಿ (ಶಿರಗುಪ್ಪ ತಾ.) ಆದಿಹಳೆಯ ಶಿಲಾಯುಗದ ಮಹತ್ವದ ಕಲ್ಲಿನ ಉಪಕರಣಗಳನ್ನು ಮತ್ತು ಸಮಕಾಲೀನ

ಪ್ರಾಣಿಗಳ ಪಡಿಯಚ್ಚುಗಳನ್ನು ಶೋಧಿಸಿದರು. ಹಂಪಿ ಆನೆಗೊಂದಿ ಪ್ರದೇಶದಲ್ಲಿಯೂ ಮತ್ತು ಗಂಗಾವತಿಯ ಉತ್ತರ ಮತ್ತು ಈಶಾನ್ಯ ದಿಕ್ಕಿಗಿರುವ ಪಿಕ್ಲಿಹಾಳ (ಅಲ್ಚಿನ ಎಫ್.ಆರ್. ೧೯೬೦) ಮತ್ತು ಮಸ್ಕಿ (ಥಾಫರ್ ಬಿ.ಕೆ. ೧೯೫೭)ಯಲ್ಲಿ ನೂತನ ಶಿಲಾಯುಗದ ಕಬ್ಬಿಣದ ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ಸಾಂಸ್ಕೃತಿಕ ಅವಶೇಷಗಳು ಈ ಮೊದಲೇ ಶೋಧವಾಗಿದೆ.[೧] ಗಂಗಾವತಿಯ ದಕ್ಷಿಣಕ್ಕೆ ಸುಮಾರು ೩೦ ಕಿ.ಮೀ. ದೂರದಲ್ಲಿರುವ ಗಂಗಾವತಿ - ಕೊಪ್ಪಳ ಮಧ್ಯದ ಪರ್ವತಶ್ರೇಣಿ ಪ್ರದೇಶದಲ್ಲಿ ಹಲವಾರು ನೂತನ ಬೃಹತ್ ಶಿಲಾಯುಗದ ಮತ್ತು ಇತಿಹಾಸ ಆರಂಭಕಾಲದ ನೆಲೆಗಳು ಹಲವಾರು ಕಲ್ಗೋರಿಗಳು (ಸುಂದರ ಅ. ೧೯೭೬ : ೯೭ - ೧೧೬)[೨] ಪ್ರಾಗಿತಿಹಾಸ ಕಾಲದ ವರ್ಣಚಿತ್ರ ಗವಿಗಳು ಇವೆ. (ಸುಂದರ ಅ. ೧೯೮೭: ೧ -೩೧)[೩]

ಗಂಗಾವತಿ ಸುತ್ತಮುತ ಇಂತಹ ಪ್ರಾಚೀನ ಪ್ರದೇಶದ ಶೋಧನೆಗಳ ಬಗ್ಗೆ ಈಗಾಗಲೇ ಮೇಲೆ ಉಲ್ಲೇಖಿಸಲಾಗಿದೆ. ಇಂತಹ ಶೋಧಿಸಿದ ನೆಲೆಗಳಲ್ಲಿ ನಾಲ್ಕನ್ನು ವೈಜ್ಞಾನಿಕ ಕ್ರಮದಿಂದ ಉತ್ಪನನ ಮಾಡಲಾಗಿದೆ. ಅವುಗಳು ಮಸ್ಕಿ (ಥಾಪರ ಬಿ.ಕೆ. ೧೯೫೭) ಪಿಕ್ಲಿಹಾಳ (ಅಲ್ಚಿನ ಎಫ್.ಆರ್ ೧೯೬೦) ತಕ್ಕಲಕೋಟೆ (ನಾಗರಾಜರಾವ್ ಎಂ.ಎಸ್ ೧೯೬೫) ಮತ್ತು ಸಂಗನಕಲ್ಲ (ಅನ್ಸಾರಿ ಝುಡ್.ಡಿ ಮತ್ತು ನಾಗರಾಜರಾವ್ ಎಂ.ಎಸ್ ೧೯೬೯) ಈ ಎಲ್ಲಾ ಉತ್ಪನನಗಳ ವರದಿಗಳು ಪ್ರಕಟವಾಗಿದ್ದು ಅವುಗಳಲ್ಲಿ ನೂತನ ಶಿಲಾಯುಗ, ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭಕಾಲದ ಜನಜೀವನ ಚಿತ್ರವನ್ನು ಸ್ಥೂಲವಾಗಿ ವಿವರಿಸಲಾಗಿದೆ. ಆದ್ದರಿಂದ ಗಂಗಾವತಿ ಪ್ರದೇಶದಲ್ಲಿ ಆದಿಹಳೆಯ ಶಿಲಾಯಗದ ಕಾಲದಿಂದ ಇತಿಹಾಸ ಆರಂಭಕಾಲದವರೆಗಿನ ಜನಜೀವನದ ಚಿತ್ರವನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ.[೪]

ಹೀಗೆ ಶಿಲಾಯುಗದ ಜನರ ಜೀವನ ಚಿತ್ರಣದಲ್ಲಿ ಅನುಕ್ರಮವಾಗಿ ನಾಲ್ಕು ಹಂತಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ ಆದಿಹಳೆಯ ಶಿಲಾಯುಗ, ಮಧ್ಯಹಳೆಯ ಶಿಲಾಯುಗ, ಅಂತ್ಯಶಿಲಾಯುಗ ಮತ್ತು ಸೂಕ್ಷ್ಮಶಿಲಾಯುಗ ಈ ಕೊನೆಯ ಹಂತದಿಂದ ಮತ್ತೆ ಅನುಕ್ರಮವಾಗಿ ನೂತನ ಶಿಲಾಯುಗ ಇದರಲ್ಲಿಯೇ ಶಿಲಾ - ತಾಮ್ರಯುಗದ ಹಂತ, ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭಕಾಲದ ಹಂತಗಳನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಹೀಗೆ ವೈಜ್ಞಾನಿಕ ಕ್ರಮದಿಂದ ತಿಳಿದುಬಂದ ಜನಜೀವನದ ಸ್ಥೂಲ ಪರಿಚಯವನ್ನು ಈ ಕೆಳಗೆ ಸಂಗ್ರಹಿಸಲಾಗಿದೆ.

**ಹಳೆಯಶಿಲಾಯುಗ ಸಂಸ್ಕೃತಿ :**

**೧. ಆದಿಹಳೆಯ ಶಿಲಾಯುಗದ ಸಂಸ್ಕೃತಿ :**

ಗಂಗಾವತಿ ಪ್ರದೇಶದಲ್ಲಿ ಈ ಸಂಸ್ಕೃತಿ ಬೆಳೆದುಬಂದಿತ್ತು ಎನ್ನುವುದಕ್ಕೆ ಈ ಪ್ರದೇಶದ ನಿಟ್ಟೂರ ಮತ್ತು ಹುಣಸಗಿ ನಲೆಗಳು ಸಾಕ್ಷಿಯಾಗಿದೆ.

**ನಿಟ್ಟೂರು :**

ಬಳ್ಳಾರಿ ಜಿಲ್ಲೆಯ ಶಿರುಗುಪ್ಪ ತಾಲೂಕಿನಲ್ಲಿ ತುಂಗಭದ್ರಾ ನದಿಯ ಬಲತೀರದಲ್ಲಿರುವ ನಿಟ್ಟೂರು ಒಂದು ಮಹತ್ವದ ನೆಲೆಯಾಗಿದ್ದು ಇಲ್ಲಿ ಅನಿರೀಕ್ಷಿತವಾಗಿ ಹಾಗೂ ಅಪರೂಪವಾಗಿ ಮೊದಲನೆಯ ಬಾರಿಗೆ

ಸಾಮಾನ್ಯವಾಗಿ ವರ್ಣಿಸಲಾದ ಬೆಣಚು ಕಲ್ಲಿನಿಂದ (ಉಂಡೆಕಲ್ಲು) ಮಾಡಿದ ಮಚ್ಚಿನಂತಹ ಉಪಕರಣಗಳು ದೊರೆತವು. ಇವುಗಳೊಡನೆ ಸಸ್ತನಿ ಪ್ರಾಣಿಗಳಾದ ಆಕಳು, ಎತ್ತುಗಳ ಅಸ್ತಿಗಳು ದೊರೆತವು.

ಈ ಆಯುಧಗಳನ್ನು ಕಪ್ಪು - ಹಸಿರು ಶಿಲೆ (ಡೊಲರೈಟ್)ಯಲ್ಲಿ ಮೇಲ್ಮುಖವಾಗಿ ಚಕ್ಕೆಗಳನ್ನು ಎಬ್ಬಿಸುವ ತಾಂತ್ರಿಕ ವಿಧಾನದಿಂದ ಮಾಡಲಾಗಿದೆ. ಇವು ದಕ್ಷಿಣ ಭಾರತದಲ್ಲೆಲ್ಲ ಹೆಚ್ಚಾಗಿ ಕಂಡುಬಂದ ಕೈಕೊಡಲಿ ಸೀಳುಗತ್ತಿ ಸಂಪ್ರದಾಯಕ್ಕೆ ಹೊಂದಿದೆ. ಪಾಕಿಸ್ತಾನದ ಸೋನೆ ನದಿ ಬಯಲಿನಲ್ಲಿ ಹೆಚ್ಚಾಗಿ ದೊರೆತಿರುವ ಮಚ್ಚುಗತ್ತಿಯಂತ ಶಿಲಾಯುಧಗಳ ಸಂಪ್ರದಾಯದ ಉಪಕರಣಗಳಿಗೆ ಹೋಲುತ್ತದೆ. ದಕ್ಷಿಣ ಭಾರತದಲ್ಲಿ ಈ ಪ್ರಕಾರದ ಆದಿಹಳೆಯ ಶಿಲಾಯುಗದ ಸಂಸ್ಕೃತಿಯ ನೆಲೆ ದೊರೆತದ್ದು ಇದೇ ಪ್ರಥಮ. ಈ ಪ್ರದೇಶದಲ್ಲಿ ಒಂದು ಭಿನ್ನ ಸಂಸ್ಕೃತಿಯ ನೆಲೆ ಇರುವುದು ಗಮನಾರ್ಹವಾಗಿದೆ.

**ಹುಣಸಗಿ :**

ಹುಣಸಗಿಯು ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲೂಕಿನಲ್ಲಿ ಕೃಷ್ಣಾನದಿಯ ಬಲತೀರದಲ್ಲಿದೆ. ಇಲ್ಲಿ ಆಕಸ್ಮಿಕವಾಗಿ ಕಂಡುಬಂದ ಆಯುಧಗಳ ಮಹತ್ವದಿಂದ ಪದ್ದಯ್ಯ (೧೯೮೨)ನವರು ಈ ನೆಲೆಯಲ್ಲಿ ಉತ್ಖನನ ಕೈಗೊಂಡರು. ಇಲ್ಲಿ ಒಂದು ಮೀಟರ್ ಆಳದಲ್ಲಿ ಕಪ್ಪು ಮಣ್ಣಿನ ಪದರು, ನಿರುಪಯೋಗಿ ಚಕ್ಕೆಕಲ್ಲುಗಳು, ಉಪಕರಣಗಳಿಂದ ಕೂಡಿದ ಕಪ್ಪು ಕಂದು ಬಣ್ಣದ ಸಡಿಲು ಮರಳಿನ ಪದರು ಆದಿಹಳೆಯ ಶಿಲಾಯಗದ ನೆಲೆಯ ಪದರು ಮತ್ತು ಸ್ವಲ್ಪಮಟ್ಟಿಗೆ ಮೇಲ್ಮೈ ಸವೆದ ತಳ ಬಂಡೆಯ ಪದರು ಈ ರೀತಿಯಾಗಿ ಕಂಡುಬಂದವು.

ಕಲ್ಲಿನ ಉಪಕರಣಗಳು ನೆಲೆಯ ಮೇಲೆಲ್ಲಾ ಹರಡಿದ್ದವು. ಬಹುಶಃ ಆಯುಧಗಳನ್ನು ತಯಾರು ಮಾಡುವ ಕಾಲದಲ್ಲಿ ನೆರಳನ್ನು ಒದಗಿಸಿಕೊಳ್ಳಲು ನಿರ್ಮಿಸಿದ ಚಿಕ್ಕ ತಟ್ಟಿಗೆಗೆ ಸುತ್ತಲೂ ಬಳಸುತ್ತಿದ್ದಿರಬಹುದಾದ ೧೨ ಕಲ್ಲುಗುಂಡುಗಳು ಇಲ್ಲಿ ಕಂಡುಬಂದಿದೆ.

ತುಂಗಭದ್ರಾ ನದಿಯ ಬಯಲು ಪ್ರದೇಶದಲ್ಲಿ ೧೯೮೦ ದಶಕದಲ್ಲಿ ಕೆ.ಪಿ.ಪೂಣಚ್ಚ ಇವರು ಮೇಲೆ ಹೇಳಿದ ಉಂಡೆಕಲ್ಲಿನ ಮಚ್ಚುಗತ್ತಿ ಮೊದಲಾದ ಉಪಕರಣಗಳುಳ್ಳ ನೆಲೆಗಳನ್ನು ಗಮನಾರ್ಹ ಸಂಖ್ಯೆಯಲ್ಲಿ ಶೋಧಿಸಿ ಅಧ್ಯಯನ ಮಾಡಿದ್ದಾರೆ. ಕೃಷ್ಣಾನದಿ ದಂಡೆಯ ಮೇಲಿರುವ ಆಂಧ್ರಪ್ರದೇಶದ ನಾಗಾರ್ಜುನ ಕೊಂಡ ಮತ್ತು ಗಿದ್ದನೂರುಗಳಲ್ಲಿಯೂ ಇಂತ ನೆಲೆಗಳಿವೆ. ಪೂಣಚ್ಚರವರು ಇಂತಹ ನೆಲೆಗಳನ್ನು ಅಧ್ಯಯನ ಮಾಡಿ ಉಪಕರಣಗಳ ಬಹುಮಟ್ಟಿಗೆ ಕೈಕೊಡಲಿ ಸೀಳುಗತ್ತಿ ಸಂಪ್ರದಾಯದ ಪೂರ್ವಾಭಾವಿ ತಪ್ಪಾಗಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಅಡ್ಡಮರೆಗಾಗಿ ನಿಲ್ಲಿಸಿದ ತಟ್ಟಿಗೆಗೆ ಬೆಂಬಲವಾಗಿ ಈ ಕಲ್ಲು ಗುಂಡುಗಳನ್ನು ಇಟ್ಟಿರಬಹುದೆಂದು ತರ್ಕಿಸಲಾಗಿದೆ. ಇಲ್ಲಿ ಹೆಚ್ಚಾಗಿ ದಪ್ಪ ಚೆಕ್ಕೆಗಳಿಂದ ಮಾಡಿದ ಕೈಕೊಡಲಿ, ಸೀಳುಗತ್ತಿ, ಚಾಕುವಿನಂತ ಉದ್ದಗತ್ತಿ, ಮಚ್ಚುಗತ್ತಿ, ನೆಲವನ್ನು ಕೆದರುವ ಉಪಕರಣಗಳು ಇದೆ. ಮಚ್ಚುಗತ್ತಿ ಭೂಮಿಯನ್ನು ಕೆದರುವ ಹರಿಯುವ ಚೆಕ್ಕೆಗಳಿರುವುದರಿಂದ ಸಂಸ್ಕೃತಿಯ ಪ್ರಾಚೀನ ಹಂತಕ್ಕೆ ಸಮೀಪವಾಗಿವೆ.

ಇಲ್ಲಿಯ ಇನ್ನೊಂದು ಅಂಶವೆಂದರೆ ಬಣ್ಣಕ್ಕಾಗಿ ದೂರದಿಂದ ತಂದ ಕೆಮ್ಮಣ್ಣಿನ ಗಟ್ಟಿಗಳನ್ನು ಉಪಯೋಗಿಸುತ್ತಿದ್ದುದು ಇಂತಹ ಗಟ್ಟಿಗಳು ಇಲ್ಲಿ ದೊರೆತಿವೆ. ಈ ನೆಲೆಯಲ್ಲಿ ಪರಿಸರ ಅಧ್ಯಯನ

ಕೂಡ ಕೈಗೊಳ್ಳಲಾಗಿದ್ದು ಈಗಿನ ಹಳ್ಳದ ಇಂದಿನ ಪಾತ್ರ ಬೇಸಿಗೆಯಲ್ಲಿ ವಾಸ್ತವಿಕ ವಾಸ್ತವ್ಯದ ನೆಲೆಯಾಗಿ ಬಳಕೆಯಾಗುತ್ತಿತ್ತು. ಇಲ್ಲಿಯ ಮಣ್ಣಿನ ಪರೀಕ್ಷಣದಿಂದ ೨೦ ಜಾತಿಯ ಗಿಡಗಳ ಪ್ರಕಾರಗಳಿದ್ದಿದ್ದು ತಿಳಿದುಬರುತ್ತಿದೆ. ಈ ಎಲ್ಲಾ ಅಂಶಗಳಿಂದ ಭಾರತದಲ್ಲಿ ಆದಿಹಳೆಯ ಶಿಲಾಯುಗದ ಜನರ ವಾಸ್ತವ್ಯದ ಮೂಲನೆಲೆಗಳಲ್ಲಿ ಈ ನೆಲೆಯೂ ಒಂದಾಗಿದ್ದು ಇಲ್ಲಿ ಅವರ ವಸತಿಯ ಕುರುಹುಗಳನ್ನು ಸ್ಪಷ್ಟವಾಗಿ ಗುರುತಿಸಲಾಗಿದೆ. ಈ ಸಂಸ್ಕೃತಿಯ ಜನ ನಿಸರ್ಗದಲ್ಲಿ ದೊರೆಯುವ ಆಹಾರಗಳ ಸಂಪಾದನೆ ಮಾಡುತ್ತಾ ನೈಸರ್ಗಿಕ ಗುಹೆಗಳಲ್ಲಿ ವಾಸಿಸುತ್ತಿದ್ದರು.

ಇಂಥ ಇನ್ನು ಕೆಲ ಆದಿಹಳೆಯ ಶಿಲಾಯುಗದ ನೆಲೆಗಳು ಗಂಗಾವತಿ ಪ್ರದೇಶದ ಪಶ್ಚಿಮಕ್ಕೆ ಇರುವ ತುಂಗಭದ್ರಾ ನದಿಯ ಉಪನದಿಯಾದ ಮಲಪ್ರಭಾ ನದಿಯ ಬಯಲು ಪ್ರದೇಶದಲ್ಲಿ ಸುಮಾರು ೧೯ ನೆಲೆಗಳು (ಜೋಶಿ ಆರ್.ವಿ ೧೯೫೫ : ೫೧), ಹಾಗೂ ಇವುಗಳ ಉತ್ತರಕ್ಕೆ ಅಂದರೆ ಬಾಗಲಕೋಟೆ ಅಥಣಿ ಪ್ರದೇಶದ ಕೃಷ್ಣಾನದಿ ಬಯಲು ಪ್ರದೇಶದಲ್ಲಿ ಸುಮಾರು ೧೨ ನೆಲೆಗಳು (ಪಪ್ಪು ಆರ್.ಎಸ್ ೧೯೭೪) ಹುಣಸಗಿ ಸಮಾಪದಲ್ಲಿಯೇ ಶೋಧವಾಗಿದೆ.

**೨. ಮಧ್ಯ ಹಳೆಶಿಲಾಯುಗದ ಸಂಸ್ಕೃತಿ**

ಈ ಸಂಸ್ಕೃತಿಯ ಕೆಲವು ನೆಲೆಗಳನ್ನು ಕೃಷ್ಣಾ, ತುಂಗಭದ್ರಾ ಪ್ರದೇಶದಲ್ಲಿ ಮತ್ತು ಮರಳಭಾವಿ ಮೊದಲಾದ ಪ್ರದೇಶಗಳಲ್ಲಿ ಶೋಧಿಸಲಾಗಿದೆ. ಗಂಗಾವತಿ ಪ್ರದೇಶಕ್ಕೆ ಸಂಬಂಧಿಸಿದಂತೆ ಸಂಗನಕಲ್ಲಿನಲ್ಲಿ ನಡೆದ ೧೯೬೪ರ ಉತ್ಖನನ (ನಾರಾಂಚೆರಾವ್ ಎಂ.ಎಸ್ ೧೯೬೯)ದಲ್ಲಿಯ ನವಶಿಲಾಯುಗ ಸಂಸ್ಕೃತಿಯ ಆಯುಧಗಳ ಜೊತೆಗೆ ಈ ಸಂಸ್ಕೃತಿಗೆ ಸೇರಿದ ತೊಗಟೆಯುಳ್ಳ ಉಂಡೆಕಲ್ಲಿನಲ್ಲಿ ಮಾಡಿದ ಹರೆಯುವ ಚಕ್ಕೆಗಳು, ಮನೆಗಳು ದೊರಕಿವೆ. ಇಲ್ಲಿಯ ಉಪಕರಣಗಳಲ್ಲಿ ಪ್ರಬೇಧಗಳಿವೆ. ಇವುಗಳಲ್ಲಿ ಬದಿಯಂಚಿನಿಂದ ಹರೆಯುವ ಚಕ್ಕೆಗಳು ಹೆಚ್ಚು ಕೆಲವು ಒಂದಕ್ಕಿಂತ ಹೆಚ್ಚಿನ ಅಂಚುಗಳಿಂದ ಹರೆಯಬಹುದಾದ ಬಹುಪಯೋಗಿ ಚಕ್ಕೆಗಳು ದೊರೆತಿವೆ. ಆದಿಶಿಲಾಯುಗದ ವಿವಿಧ ಉಪಕರಣಗಳಂತೆ ಈ ಸಂಸ್ಕೃತಿಯ ಉಪಕರಣಗಳ ನಿರ್ದಿಷ್ಟ ಉಪಯೋಗವು ಸ್ಪಷ್ಟವಾಗಿ ತಿಳಿದಿಲ್ಲ.

ಇಂಥ ಉಪಕರಣಗಳಲ್ಲಿ ರೇವುಮಣ್ಣಿನಲ್ಲಿಯ ಅವಶೇಷಗಳ ಇಂಗಾಲ - ೧೪ ನನ್ನ ವೈಜ್ಞಾನಿಕ ಕ್ರಮದಿಂದ ಪರಿಶೋಧಿಸಿ ಕಾಲಮಾನವನ್ನು ಗೊತ್ತುಪಡಿಸಲಾಗಿದೆ. ಅದು ಇಂದಿನಿಂದ ಹಿಂದಕ್ಕೆ ಸುಮಾರು ೩೯೦೦ - ೧೯೦೦ ವರ್ಷಗಳ ಅಂತರದ ಕಾಲದ್ದಾಗಿದೆ. ಈ ಸಂಸ್ಕೃತಿಯ ನೆಲೆಗಳು ನದಿ ದಂಡೆಯಿಂದ ದೂರದ ಬಯಲುಗಳಲ್ಲಿರುವುದರಿಂದ ಆ ಕಾಲದ ಜನರು ಭಿನ್ನ ವಾತಾವರಣಗಳಲ್ಲಿ ಜೀವಿಸಲು ಸಮರ್ಥರಿದ್ದಾರೆಂದು ಕಾಣುತ್ತದೆ.

**೩. ಅಂತ್ಯಹಳೆಯ ಶಿಲಾಯುಗದ ಸಂಸ್ಕೃತಿ :**

ಹಳೆಯ ಶಿಲಾಯುಗದ ಸಂಸ್ಕೃತಿಯ ಬಗ್ಗೆ ತೀರ ಕಡಿಮೆ ತಿಳಿದುಬಂದಿದೆ. ಗಂಗಾವತಿ ಪ್ರದೇಶಕ್ಕೆ ಸಂಬಂಧಿಸಿದಂತೆ ಪದ್ದಯ್ಯನವರು (೧೯೮೨: ೨೩ - ೩೩) ಸಾಲ್ವಡಗಿಯ ಹತ್ತಿರ ಮೇಲಭಾವಿಯಲ್ಲಿ ಈ ಸಂಸ್ಕೃತಿಯ ಒಂದು ನೆಲೆಯನ್ನು ಶೋಧಿಸಿದರು. ೧೯೬೯ರಲ್ಲಿ ಅವರು ಮೇಲಭಾವಿ, ಗುಲಬಾಳ, ಜಿನಹಳ್ಳಿ, ಹುಣಸಿಗಿಯಲ್ಲಿ ಹೆಚ್ಚಿನ ಅನ್ವೇಷಣೆ ಮಾಡಿದಾಗ ಮಧ್ಯ ಹಳೆಯಶಿಲಾಯುಗದ ಅನಂತರ

ಮತ್ತು ಸೂಕ್ಷ್ಮ ಶಿಲಾಯುಗದ ಹಿಂದಿನ ಹಂತದಲ್ಲಿ ಈ ಸಂಸ್ಕೃತಿಯಿದ್ದುದು ಗೊತ್ತಾಯಿತು. ಈ ಸಂಸ್ಕೃತಿಯು ಹಿಮಯುಗದ ಅಂತ್ಯದ ಹಾಗೂ ಪ್ರಚಲಿತಯುಗದ ಪ್ರಾರಂಭದ ಕಾಲದ್ದೆಂದು ತರ್ಕಿಸಲಾಗಿದೆ.

**೪. ಸೂಕ್ಷ್ಮಶಿಲಾಯುಗದ ಸಂಸ್ಕೃತಿ :**

ಗಂಗಾವತಿ ಪ್ರದೇಶಕ್ಕೆ ಸಂಬಂಧಿಸಿದಂತೆ ಸಂಗನಕಲ್ಲಿನಲ್ಲಿ ಸೂಕ್ಷ್ಮಶಿಲಾಯುಗದ ನೆಲೆಯು ಕಂಡುಬಂದಿದ್ದು, ಇಲ್ಲಿ ನೂತನ ಶಿಲಾಯುಗಕ್ಕಿಂತ ಮೊದಲಿನ ಉಪಕರಣಗಳು ಸಿಕ್ಕಿದೆ. ಆದ್ದರಿಂದ ಈ ಸಂಸ್ಕೃತಿಯು "ಈಚೀನ ಯುಗ"ದ ಪ್ರಾರಂಭಕಾಲದ ನಂತರದ್ದುವೆಂದು ಗೊತ್ತುಪಡಿಸಲಾಗಿದೆ. ಸಮಾನಾಂತರ ಅಂಚುಳ್ಳ ನೀಳ ಚಕ್ಕೆಗಳು ಅಲ್ಲದೆ ಮನೆಗಳು ಅರ್ಧಚಂದ್ರಾಕೃತಿಯಂಥಹ ತ್ರಿಕೋನಾಕಾರಾದ ಮತ್ತು ದ್ವಿಬಾಹು ಸಮಾನಾಂತರ ಚತುರ್ಭುಜಾಕೃತಿಯಂಥಹ ಉಪಕರಣಗಳು ಆಕೃತಿಗಳಿವೆ. ಸಾಮಾನ್ಯವಾಗಿ ನೀಳಚಕ್ಕೆಗಳನ್ನು ತುಂಡು ಮಾಡಿ ಅವುಗಳ ಅಂಚುಗಳನ್ನು ಅವಶ್ಯವಾದ ರೀತಿಯಲ್ಲಿ ಉಪಕರಣಗಳನ್ನು ಮಾಡಲಾಗಿದೆ.

ಸಾಮಾನ್ಯವಾಗಿ ಈ ಉಪಕರಣಗಳನ್ನು ಸಮೀಪದಲ್ಲಿಯೇ ಹೆಚ್ಚಾಗಿ ದೊರೆಯುವ ಬೆಣಚುಕಲ್ಲು (ಕ್ವಾಡ್ಜ) ಮತ್ತು ಉತ್ತಮ ಜಾತಿಯ ಕಲ್ಲುಗಳಾದ ಜಾಸ್ಪರ್ ಮತ್ತು ಚರ್ಟಕಲ್ಲುಗಳಿಂದ ಮಾಡಲಾಗಿದೆ. ಸಾಮಾನ್ಯವಾಗಿ ಇವುಗಳ ಆಕೃತಿ ಚಿಕ್ಕದಾಗಿರುತ್ತವೆ. ಸಾಮಾನ್ಯವಾಗಿ ೧ ಸೆ.ಮೀ. ಹಾಗೂ ೫ ಮಿ.ಮೀ. ಉದ್ದಗಲಕ್ಕಿಂತ ಹೆಚ್ಚೇನು ಇಲ್ಲ ಇವುಗಳ ಇಂಥ ಸಣ್ಣ ಪ್ರಮಾಣದ ಆಕಾರದ ಮೇಲೆಯೇ ಈ ಸಂಸ್ಕೃತಿಯನ್ನು ಸೂಕ್ಷ್ಮಶಿಲಾಸಂಸ್ಕೃತಿ ಎಂದು ಕರೆಯಲಾಗಿದೆ. ಸಿದ್ಧಮಾಡಿದ ಒಂದು ಗಿಡದ ರೆಂಬೆಯಲ್ಲಿ ಅವಶ್ಯವಿದ್ದಷ್ಟು ಆಳವಾದ ಗೆರೆಗಳನ್ನು ಮೂಡಿಸಿ ಆ ಗೆರೆಯಲ್ಲಿ ಈ ಸಣ್ಣ ಸಣ್ಣ ಉಪಕರಣಗಳನ್ನು ಒಂದರ ಪಕ್ಕದಲ್ಲಿ ಮತ್ತೊಂದನ್ನು ಜೋಡಿಸಿ ವಿವಿಧ ಪ್ರಕಾರದ ವ್ಯವಸಾಯಕ್ಕೆ ಉಪಯೋಗಿಸಲಾಗುತ್ತಿತ್ತು. ಈ ಸಂಸ್ಕೃತಿಯನ್ನು ಬೇರೆ ಭಾಗದಲ್ಲಿ ಇಂಥ ನೆಲೆಗಳ ಅಧ್ಯಯನದಿಂದ ೩ ಹಂತಗಳನ್ನು ಗುರುತಿಸಲಾಗಿದೆ. ಅತ್ಯಂತ ಪ್ರಾಚೀನ ಹಂತ ಸು. ಕ್ರಿ.ಪೂ. ೭೦೦೦ ಎರಡನೆಯ ಹಂತ ಸು.ಕ್ರಿ.ಪೂ. ೫೦೦೦ ಮೂರನೆಯ ಹಂತ ಕ್ರಿ.ಪೂ. ೩೦೦೦ ಕಾಲಮಾನವದೆಂದು ತರ್ಕಿಸಲಾಗಿದೆ. ಬಹುಮಟ್ಟಿಗೆ ಒಂದು ಕಡೆ ನೆಲೆಯಾಗಿ ನಿಂತು ಸಾದಾರಣ ಗುಡಿಸಲನ್ನು ಕಟ್ಟಿಕೊಂಡು ಈ ಜನಗಳು ವಾಸಿಸುತ್ತಿದ್ದರೆಂದು ಕಂಡುಬಂದಿದೆ. ಹೆಚ್ಚಾಗಿ ಸಂಗ್ರಹಣ ಕಾಲದಿಂದ ಆಹಾರ ಸಂಪಾದನೆ ಮಾಡಿದ್ದರು. ಬೀಜ ಬಿತ್ತಿ ಬೆಳೆಯುವ ಕ್ರಮವನ್ನು ಸ್ವಲ್ಪಮಟ್ಟಿಗೆ ಇವರು ಅನುಸರಿಸುತ್ತಿದ್ದರು. ಕೊನೆಯ ಹಂತದಲ್ಲಿ ಸಂಗ್ರಹಿಸಿದ ಹಾಗೂ ಬೆಳೆದ ದವಸ ಧಾನ್ಯಗಳನ್ನು ಕೂಡಿಡಲು ಮಣ್ಣಿನಿಂದ ಮಾಡಿದ ಬಿಸಿಲಿನಲ್ಲಿ ಒಣಗಿಸಿದ ಮಡಿಕೆ ಕುಡಿಕೆಗಳನ್ನು ಮಾಡುತ್ತಿದ್ದರು. ಇವರಲ್ಲಿ ಶವಸಂಸ್ಕಾರ ಪದ್ಧತಿಯೂ ಬೆಳೆದಿತ್ತು. ಆದ್ದರಿಂದ ಸಾಮಾಜಿಕ ಮೂಲಭೂತ ಅಂಶಗಳು ಈ ಹಂತದಲ್ಲಿದ್ದಾಗಲೇ ಕಂಡುಬಂದವು.

**೫. ನವಶಿಲಾಯುಗ ಸಂಸ್ಕೃತಿ (ಕ್ರಿ.ಪೂ. ೧೭೦೦ - ೮೦೦) :**

ಉಜ್ಜಿನಯಗೊಳಿಸಿದ ಆಯುಧಗಳ ಉಪಯೋಗ, ನದಿ ತೀರದ ಫಲವತ್ತಾದ ಭೂಮಿಯಲ್ಲಿ ನೆಲೆಸುಬುಧು ಮಣ್ಣಿನ ಪಾತ್ರೆಗಳ ಉಪಯೋಗ, ನಾಯಿ, ಆಕಳು, ಎತ್ತು ಮೊದಲಾದ ಸಾಕುಪ್ರಾಣಿಗಳನ್ನು ಸಾಕುವಿಕೆ, ವ್ಯವಸಾಯ, ಬಿಸಿಲಿನಲ್ಲಿ ಒಣಗಿಸಿದ ಬೂದುಬಣ್ಣದ ಮೃತಪಾತ್ರೆಗಳನ್ನು ಮಾಡುವುದು

ಮೊದಲಾದ ಲಕ್ಷಣಗಳಿಂದ ಕೂಡಿದ ಸಂಸ್ಕೃತಿಗೆ `ನವಶಿಲಾಯುಗ ಸಂಸ್ಕೃತಿ` ಎಂದು ಕರೆಯಲಾಗಿದೆ.

ಈ ಹಂತದ ಅತಿ ಮುಖ್ಯ ಲಕ್ಷಣವೆಂದರೆ ಶಿಲಾಯುಧಗಳು. ಜೊತೆಗೆ ತಾಮ್ರ ಅಥವಾ ಕಂಚಿನ ಆಯುಧಗಳ ಬಳಕೆ ಕೆಲವೆಡೆ ಇವುಗಳ ಜೊತೆಗೆ ಸೂಕ್ಷ್ಮ ಶಿಲಾಯುಧಗಳನ್ನು ಬಳಸುತ್ತದ್ದರಿಂದ ಈ ಹಂತದ ಸಂಸ್ಕೃತಿಯನ್ನು ಕಂಚಿನ ಅಥವಾ ಶಿಲಾ ತಾಮ್ರಯುಗವೆಂದು ಕರೆಯಲಾಗಿದೆ.

ಕನಕಗಿರಿ ಪ್ರದೇಶದ ತೆಕ್ಕಲಕೋಟೆ, ಸಂಗನಕಲ್ಲು (ಬಳ್ಳಾರಿ), ತಾವರೆಗೇರಾ, ಮಸ್ಕಿ, ಪಿಕ್ಲಿಹಾಳ, ಮತ್ತು ಉಟಗಲೆ (ರಾಯಚೂರು) ಈ ಸಂಸ್ಕೃತಿಯ ಮಹತ್ವದ ನೆಲೆಗಳಾಗಿವೆ. ತಾವರಗೇರವನ್ನು ಬಿಟ್ಟು ಉಳಿದೆಲ್ಲಾ ನೆಲೆಗಳಲ್ಲಿ ಉತ್ಖನನ ಕೈಗೊಂಡಿದ್ದರಿಂದ ಈ ಪ್ರದೇಶದಲ್ಲಿ ನವಶಿಲಾಯುಗ ಸಂಸ್ಕೃತಿಯ ಬಗ್ಗೆ ತಿಳಿದುಬರುತ್ತದೆ. ಸಂಗನಕಲ್ಲು ಮಸ್ಕಿಗಳ ಉತ್ಖನನ ವರದಿಯನ್ನು ಈ ಮುಂದೆ ವಿವರಿಸಲಾಗಿದೆ.

**ಸಂಗನಕಲ್ಲು ಉತ್ಖನನ :**

ಬಳ್ಳಾರಿಯಿಂದ ೫ ಕಿ.ಮೀ. ದೂರದಲ್ಲಿರುವ ಸಂಗನಕಲ್ಲು ಗ್ರಾಮದ ನೆಲೆಯು ಕರ್ನಾಟಕದ ನವಶಿಲಾಯುಗ ಮತ್ತು ತಾಮ್ರ ಶಿಲಾಯುಗದ ಸಂಸ್ಕೃತಿಯನ್ನು ಚಿತ್ರಿಸಲು ಕೆಲವೊಂದು ಮಹತ್ವದ ಅಂಶಗಳನ್ನು ನೀಡಿದೆ. ರಾಬರ್ಟ್ ಬ್ರೂಸ್ ಫೂಟ್ (೧೯೮೯ : ೧೮)ರು ಈ ನಿವೇಶನವನ್ನು ಶೋಧಿಸಿದರು. ೧೯೪೮ರಲ್ಲಿ ಬಿ.ಸುಬ್ಬರಾವ್‌ರವರು (೧೯೪೮) ಇಲ್ಲಿ ಸಣ್ಣ ಪ್ರಮಾಣದ ಉತ್ಖನನ ನಡೆಸಿದ್ದರು. ಅನಂತರದ ಪುಣೆಯ ಡೆಕ್ಕನ್ ಕಾಲೇಜಿನ ಝಡ್.ಡಿ.ಅನ್ಸಾರಿ ಮತ್ತು ಎಂ.ಎಸ್.ನಾಗಾರಾಜರವರು (೧೯೬೯) ಇಲ್ಲಿ ವಿವರಣಾ ಪೂರ್ಣವಾಗಿ ಉತ್ಖನನ ಕಾರ್ಯ ಕೈಗೊಂಡರು ಇದರಿಂದಾಗಿ ಪೂರ್ವ ಮೆಸುಲೆತಿಕ್ ನವಶಿಲಾಯುಗದ ಮತ್ತು ಬೃಹತ್ ಶಿಲಾಯುಗ ಎಂದ ಪ್ರಾಗೈತಿಹಾಸಿಕ ಸಂಸ್ಕೃತಿಗಳ ಹಂತವನ್ನು ಇಲ್ಲಿ ಗುರುತಿಸಲಾಗಿದೆ. ಇಲ್ಲಿ ಭೂಗೋಳ, ನೆಲ, ಹವಾಮಾನ ಇತ್ಯಾದಿಗಳನ್ನು ಅಧ್ಯಾಯ ಮಾಡಲಾಗಿದ್ದು ಅದರ ಹಿನ್ನೆಲೆಯಲ್ಲಿ ಉತ್ಖನನ ಕೈಗೊಳ್ಳಲಾಗಿದೆ.

ಇಲ್ಲಿಯ ಆಯುಧಗಳನ್ನು ಬಸಾಲ್ಟ್ ಡಯೋರೈಟ್ ಮುಂತಾದ ಶಿಲೆಗಳಿಂದ ಹರಿತವಾದ ಅಂಚುಗಳ ಆಯುಧ, ಮೊನೆಯುಳ್ಳ ಉಪಕರಣ, ಕಟ್ಟುವ ಅರೆಯುವ ಸಾಧನಗಳು ಮುಂತಾದವುಗಳನ್ನು ಇಲ್ಲಿ ಮುಖ್ಯವಾಗಿ ಹೆಸರಿಸಬಹುದು. ನಯಗೊಳಿಸಿದ ಕಲ್ಲಿನ ಕೊಡಲಿಗಳ ಜೊತೆ ಸೂಕ್ಷ್ಮ ಶಿಲಾಯುಧಗಳು ದೊರೆತದ್ದರಿಂದ ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯೊಂದಿಗೆ ನವಶಿಲಾಯುಗೀನ ಸಂಸ್ಕೃತಿ ಹೇಗೆ ವಿಲೀನವಾಗಿರಬಹುದೆಂದು ವಾದಿಸಲು ಅಸಾಧ್ಯ. ಇಲ್ಲಿ ದೊರೆತ ಆಯುಧೋಪಕರಣಗಳ ವೈವಿಧ್ಯ ಮತ್ತು ಪ್ರಮಾಣಗಳನ್ನು ಆಧರಿಸಿ ಇವನ್ನು ಉದ್ದಿಮೆ ಸ್ಥಳವೆಂದ ಬಣ್ಣಿಸಲಾಗಿದೆ. ಇಲ್ಲಿ ದೊರೆತ ಮಡಿಕೆ, ಕುಡಿಕೆಗಳನ್ನು ಜೇಡಿಮಣ್ಣಿನಿಂದ ಮಾಡಲಾಗಿದೆ. ಇವುಗಳ ಮೇಲೆ ಮಾಸುಬೂದುವರ್ಣ ದ್ರವದ ಲೇಪನವನ್ನು ಕೊಡಲಾಗಿದೆ. ಇವು ಗಮನಾರ್ಹವಾದವು.

ಮೂಳೆಗಳಿಂದ ಮಾಡಿದ ಮೊನಚಾದ ದಬ್ಬಣ ತರಹ ಉಪಕರಣಗಳು ಹಾಗೂ ಕಲ್ಲಿನ ಮತ್ತು ಮಣಿಗಳು, ಕುದುರೆಯ ಮೂಳೆಗಳು ದೊರೆತಿವೆ.

ನವಶಿಲಾಯುಗದ ನಂತರ ಬೃಹತ್ ಶಿಲಾಯುಗದ ಆರಂಭಕಾಲದ ಸಂಸ್ಕೃತಿಯ ಚಿತ್ರಣ ಕೂಡ ನಡೆಸಿದ ಉತ್ಖನನದಿಂದ ತಿಳಿಯಲು ಸಾಧ್ಯವಾಗಿದೆ. ಮೇಲ್ಪದರದಲ್ಲಿ ಬೃಹತ್‌ಶಿಲಾಯುಗದ ಅವಶೇಷಗಳಲ್ಲಿ ಕೆಂಪು, ಕಪ್ಪು ಬಣ್ಣದ ಮಡಿಕೆಗಳು ಕಬ್ಬಿಣದ ಆಯುಧೋಪಕರಣಗಳು ದೊರೆತಿವೆ.

ಇಲ್ಲಿಯ ಉತ್ಖನನದಲ್ಲಿ ತೋರಿಬಂದ ಮುಖ್ಯಾಂಶಗಳಲ್ಲಿ ನೂತನ ಶಿಲಾಯುಗದ ಒಂದು ಗುಡಿಸಲಿನ ಮನೆಯ ಅವಶೇಷ ದೊರಕಿದ್ದು, ಸು. ೩ ಮೀ ವ್ಯಾಸದ ವೃತ್ತಾಕಾರದ ಗುಡಿಸಲು ಇದು ಆಗಿದ್ದು ಇದರ ನೆಲಕ್ಕೆ ಗ್ರಾನೈಟ್ ಕಲ್ಲಿನ ಚೂರುಗಳನ್ನು ಹಾಕಿ ದುಮ್ಮಸ್ಸು ಮಾಡಲಾಗಿದ್ದೆ. ಬಳ್ಳಿ ಮತ್ತು ಗಿಡದ ಕಾಂಡಗಳಿಂದ ಮಾಡಲ್ಪಟ್ಟ ತಡಿಕೆಗೆ ಕಲಸು ಮಣ್ಣು ಮೆತ್ತಿ ಗೋಡೆಯನ್ನು ಮಾಡಲಾಗಿದೆ. ಗುಡಿಸಲಿನ ಮಧ್ಯದಲ್ಲಿ ಅತೀ ಎತ್ತರ ಕಂಬವನ್ನು ನೆಟ್ಟು ಕಂಬದ ತುದಿಯಿಂದ ಗೋಡೆಯ ಮೇಲೆ ಇಳಿ ಬೀಳುವ ಹಾಗೆ ಮಾಡಲಾಗಿದೆ. ಈ ರೀತಿಯ ನೂತನ ಶಿಲಾಯುಗದ ಜನರ ಒಂದು ಸಾಮಾನ್ಯ ಮನೆ ಹೇಗೆ ಇರುತ್ತಿತ್ತು ಎಂಬುದು ಈ ಸಂಶೋಧನೆಯಿಂದ ಖಚಿತವಾಗಿದೆ.

ಸಂಗನಕಲ್ಲಿನ ಉತ್ಖನನದ ಮತ್ತೊಂದು ಮುಖ್ಯಾಂಶವೆಂದರೆ ಇಲ್ಲಿ ದೊರೆತ ಮಣ್ಣಿನ ಬೊಂಬೆಗಳು ಮುಖ್ಯವಾಗಿ ಆಕಳು, ಎತ್ತುಗಳ ಬೊಂಬೆಗಳೇ ಹೆಚ್ಚಾಗಿದ್ದು ಬಹು ಸುಂದರವಾಗಿ ಮೈತುಂಬಿದ ಆರೋಗ್ಯಕರ ಎತ್ತು, ದನಗಳನ್ನು ರಚಿಸಲಾಗಿದೆ. ಆದ್ದರಿಂದ ಅತೀ ಪ್ರಾಚೀನ ವಾಸ್ತು ಮತ್ತು ಮೂರ್ತಿಶಿಲ್ಪದ ಹಿನ್ನೆಲೆ ಅಥವಾ ಪ್ರಾರಂಭದ ಘಟ್ಟವನ್ನು ಇವುಗಳಿಂದ ತಿಳಿಯಬಹುದು.

**ಮಸ್ಕಿ ಉತ್ಖನನ :**

ಮಸ್ಕಿಯು ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನಲ್ಲಿದೆ. ಇಲ್ಲಿ ಅಶೋಕನ ಶಾಸನ ದೊರೆತ ಸ್ಥಳದ ಸುತ್ತಮುತ್ತಲಿನ ವಿಸ್ತಾರದಲ್ಲಿ ಕನಿಷ್ಟ ನೂತನ ಶಿಲಾಯುಗದ ಜನವಸತಿಯ ಕುರುಹುಗಳಿವೆ. ರಾಬರ್ಟ್ ಬ್ರೂಸೆ ಫ್ರೂಟೆ (೧೯೭೯ : ೧೨೫ - ೧೨೬)ರು ಮೊದಲಿಗೆ ಈ ನೆಲವನ್ನು ಸಂಗ್ರಹಿಸಿ ನವಶಿಲಾಯುಗದ ಅನೇಕ ವಸ್ತುಗಳನ್ನು ಸಂಗ್ರಹಿಸಿದರು. ೧೯೨೮ - ೨೯ರಲ್ಲಿ ಡಿಯೋನಾಲ್ಡ್ ಕುಟುಂಬದವರು ಇಲ್ಲಿಯ ವಸ್ತುಗಳ ಕುರಿತಾಗಿ ಲೇಖನ ಪ್ರಕಟಿಸಿದರು. ನಂತರ ೧೯೩೫ - ೩೭ರಲ್ಲಿ ಆಗಿನ ಹೈದ್ರಬಾದ್ ಸರ್ಕಾರ ಇಲ್ಲಿನ ನೆಲೆಯಲ್ಲಿ ಉತ್ಖನನ ನಡೆಸಿತು. ೧೯೫೪ರಲ್ಲಿ ಭಾರತದ ಕೇಂದ್ರ ಸರ್ಕಾರದ ಪುರಾತತ್ವ ಇಲಾಖೆಯ ವತಿಯಿಂದ ಬಿ.ಕೆ.ಥಾಪರ್ (೧೯೫೭ ಎ.ಆಯ್.ನಂ. ೧೩) ಅವರು ಇಲ್ಲಿ ಮತ್ತೆ ಉತ್ಖನನ ನಡೆಸಿದರು. ಈ ಉತ್ಖನನದಲ್ಲಿ ಕೆಳಕಂಡ ಸಂಸ್ಕೃತಿಗಳ ಘಟನೆಗಳನ್ನು ಅನುಕ್ರಮಿಸಲಾಯಿತು.

ತಾಮ್ರ ಶಿಲಾ: ಸಂಸ್ಕೃತಿ ಸು. ಕ್ರಿ.ಪೂ. ೧೦೦೦ - ೪೦೦

ಕಬ್ಬಿಣದ ಬೃಹತ್ ಶಿಲಾಸಂಸ್ಕೃತಿ ಸು. ಕ್ರಿ.ಪೂ. ೨೦೦ - ೫೦

ಆದಿ ಚಾರಿತ್ರಿಕ ಸಂಸ್ಕೃತಿ ಸು. ಕ್ರಿ.ಪೂ. ೫೦ - ೩೦೦

ಮಧ್ಯಯುಗದ ಶಿಲಾ ಸಂಸ್ಕೃತಿ ಸು. ಕ್ರಿ.ಪೂ. ೧೦೦೦ - ೧೬೦೦

ಇಲ್ಲಿಯ ತಾಮ್ರಶಿಲಾಯುಗದ ಸಂಸ್ಕೃತಿಯ ಘಟ್ಟಗಳಲ್ಲಿ ತಾಮ್ರದ ಉಪಯೋಗ ಅತ್ಯಲ್ಪವಾಗಿದ್ದಂತೆ

ತೋರುತ್ತದೆ. ಹೆಚ್ಚಿನ ಆಯುಧೋಪಕರಣಗಳಲ್ಲಿ ಚರ್ಟ್‌ಜಾತಿಯ ಹರಿತವಾದ ಚಾಕುವಿನಂತಹ ಆಯುಧಗಳು, ಕುಡುಗೋಲಿನಂತಹ ಉಪಕರರಣಕ್ಕೆ ಉಪಯೋಗಿಸಿದ ಸಣ್ಣ ಸಣ್ಣ ಚಕ್ಕೆಚೂರುಗಳು, ಸೂಕ್ಷ್ಮ ಶಿಲಾಯುಧಗಳು ಮತ್ತು ಅವುಗಳನ್ನು ತಯಾರಿಸಲು ಉಪಯೋಗಿಸಿತ್ತಿದ್ದ ದಿಂಡುಕಲ್ಲುಗಳು ಇವೆ. ನಯವಾದ ಕರಿಕಲ್ಲಿನ ಕೊಡಲುಗಳು ಹಾಗೂ ದನ ಕುರಿ ಮೊದಲಾದ ಸಾಕುಪ್ರಾಣಿಗಳ ಮೂಳೆಗಳು ಇಲ್ಲಿ ದೊರೆತಿವೆ. ಆದರೆ ಮನೆಗಳ ಬಗ್ಗೆ ತಿಳಿದುಬಂದಿಲ್ಲ ಮಡಿಕೆಗಳು ಕಂದು ಮತ್ತು ನಸುಗೆಂಪು ಬಣ್ಣದಿಂದ ಕೂಡಿದ್ದು ಹೆಚ್ಚಿನವು ತಿಗರಿಯಲ್ಲಿ ತಯಾರಾಗಿವೆ. ಜೊತೆಗೆ ಕಾರ್ನಿಲಿಯನ್ ಅಗೇಟ್ ಶಂಖದ ಮತ್ತು ಮಣ್ಣಿನ ಮಣಿಗಳು ದೊರೆತಿವೆ.

ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ಕಾಲದ ವೈಶಿಷ್ಟ್ಯಗಳೆಂದರೆ ಬೃಹತ್ ಶಿಲಾಸಮಾಧಿಗಳು ಮತ್ತು ಕಬ್ಬಿಣದ ಬಳಕೆ. ಈ ಸಂಸ್ಕೃತಿಯಲ್ಲಿ ಕಪ್ಪು ಮತ್ತು ಕೆಂಪು ಬಣ್ಣದ ತಿಗರಿಯ ಮೇಲೆ ಮಾಡಿದ ಮಡಿಕೆಗಳು ಹೇರಳವಾಗಿ ಕಂಡುಬಂದಿದೆ. ಶಂಖದ ಬಳೆ ಮಣ್ಣಿನ ಮಣಿ ಚಿಕ್ಕ ಚಿಕ್ಕ ಆಟದ ಬಿಲ್ಲೆಗಳು ಮತ್ತು ಗೋವಿಗಳು ಇಲ್ಲಿ ದೊರೆತಿವೆ. ಕೆಲವು ಕುಂಬಗಳ ಗುಳಿಗಳನ್ನು ಬಿಟ್ಟರೆ ಆ ಕಾಲದ ಮನೆಗಳ ಬಗ್ಗೆ ಯಾವ ಮಾಹಿತಿಗಳು ದೊರೆಯುವುದಿಲ್ಲ.

ಇನ್ನು ಈ ಕಾಲಕ್ಕೆ ಸೇರಿದ ೫ ವಿಧದ ಸಮಾಧಿಗಳನ್ನು ಗುರುತಿಸಿ ಅಗೆಯಲಾಯಿತು. ಇವೆಲ್ಲ ಗುಳಿ ಸಮಾಧಿ ರೀತಿಯವು. ಮೊದಲನೆಯ ವಿಧದಲ್ಲಿ ಗುಂಡಿಯ ಒಳಗೆ ಅಲ್ಪ ಅವಶೇಷಗಳನ್ನು ಮಡಿಕೆಯ ಒಳಗೆ ಇಟ್ಟು ಸಮಾಧಿ ಮಾಡಲಾಗುತ್ತಿತ್ತು. ಈ ಎಲ್ಲಾ ಸಮಾಧಿ ಗುಳಿಯ ನೆಲಕ್ಕೆ ಬೂದಿ ಅಥವಾ ಸುಣ್ಣದ ಪುಡಿಯನ್ನು ಹರಡಿರುವುದು ಹಾಗೂ ಈ ಸಮಾಧಿ ಗುಂಡಿಗಳು ಅಂಡಾಕೃತಿಯಲ್ಲಿ ಇದ್ದು ಸಾಮಾನ್ಯವಾಗಿ ಉತ್ತರ - ದಕ್ಷಿಣಾಭಿಮುಖವಾಗಿರುವುದು. ವಿಶೇಷವಾಗಿದೆ. ಅಲ್ಲದೆ ಒಂದನೆಯ ಮತ್ತು ನಾಲ್ಕನೆಯ ವಿಧದ ಸಮಾಧಿಗಳು ಜನವಸತಿಯ ನೆಲೆಯಲ್ಲಿಯೇ ಕಂಡುಬಂದಿದ್ದು ಗಮನಾರ್ಹವಾಗಿದೆ. ಸಾಮಾನ್ಯವಾಗಿ ಉಳಿದೆಡೆಗಳಲ್ಲಿ ಕಂಡುಬರುವ ಬೃಹತ್ ಶಿಲಾಗೋರಿಗಳಿಗಿಂತ ಇವು ಭಿನ್ನವಾಗಿವೆ. ಏಕೆಂದರೆ ಇತರೆಡೆಗಳಲ್ಲಿ ಕೇವಲ ಶವದ ಅಸ್ಥಿ ಅವಶೇಷಗಳನ್ನು ಗಡಿಗೆಗಳಲ್ಲಿ ಹಾಕಿ ಹುಗಿದರೆ ಇಲ್ಲಿ ಪೂರ್ಣ ಶವವನ್ನೇ ಹುಗಿದದ್ದು ಕಂಡುಬರುತ್ತದೆ. ಇದರಿಂದ ಬೃಹತ್ ಶಿಲಾಸಂಸ್ಕೃತಿಯ ಕಾಲದ ಒಂದು ವಿಭಿನ್ನ ಸಂಸ್ಕೃತಿಯ ಜನ ಇಲ್ಲಿ ವಾಸಿಸುತ್ತಿದ್ದರು ಎಂಬುದಾಗಿ ವಾದಿಸಬಹುದಾಗಿದೆ.

ಇತಿಹಾಸ ಆರಂಭ ಕಾಲಕ್ಕೆ ಸಂಬಂಧಿಸಿದಂತೆ ಸಾಮಾನ್ಯ ರೀತಿಯ ಕೆಂಪು, ಕಪ್ಪು ಮತ್ತು ನಸುಗೆಂಪು ಬಣ್ಣದ ಮಡಿಕೆಗಳ ಜೊತೆಗೆ ಸೌದೆಯ ನೀಳಗಳಿಂದ ಅಲಂಕೃತವಾದ ಮಡಿಕೆಗಳು ಕಂಡುಬಂದಿದೆ. ಚರ್ಟ್‌ಜಾತಿಯ ಕಲ್ಲುಗಳು ಮತ್ತು ಸುಟ್ಟ ಮಣ್ಣಿನ ಮಣಿಗಳು ಹಾಗೂ ಶಂಖದ ಬಳೆಗಳು ಈ ಸ್ಥಳದಲ್ಲಿ ದೊರೆತಿವೆ. ಕಬ್ಬಿಣದ ವಸ್ತುಗಳು ಅಲ್ಪ ಪ್ರಮಾಣದಲ್ಲಿ ದೊರೆತಿವೆ. ಈ ಕಾಲದಲ್ಲಿ ನಾಣ್ಯಗಳನ್ನು ಬಳಸಲಾಗಿದ್ದು ಇಲ್ಲಿಯ ಉತ್ಖನನದಲ್ಲಿ ಒಂದು ಸತವು ಎಂಬ ಮಿಶ್ರಿತಲೋಹದ ನಾಣ್ಯ ದೊರೆತಿವೆ.

ಮಧ್ಯಶಿಲಾಯುಗೀನ ಸ್ತರಗಳಲ್ಲಿ ಬೂದುವರ್ಣದ ನಯಗೊಳಿಸಿದ ಮಡಿಕೆಗಳು ಹೆಚ್ಚಾಗಿ ದೊರೆತಿವೆ. ಬಳೆಗಳು ಮಣಿಗಳು ಕೂಡ ದೊರೆತಿವೆ.

ಹೀಗೆ ಇಲ್ಲಿ ದೊರೆತಿರುವ ವಿಪುಲ ಸಾಮಾಗ್ರಿಗಳಿಂದ ನೆಲೆಯು ಬಹಳ ಮಹತ್ವದ ಪ್ರಾಗೈತಿಹಾಸದ ನಿವೇಶನ ಎಂದು ಗೊತ್ತಾಗುತ್ತದೆ. ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಕಾಲದಲ್ಲಿ ಐದು ಬೃಹತ್ ನಗರವಾಗಿರಬೇಕೆಂದು, ಅಶೋಕನ ಶಿಲಾ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಸುವರ್ಣಗಿರಿಯೇ ಮಸ್ಕಿ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

**ಇತರ ನೆಲೆಗಳು :**

ಉತ್ಖನನಗೊಂಡ ಈ ಮೇಲಿನ ನೆಲೆಗಳಲ್ಲದೆ ಗಂಗಾವತಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ವಿಶೇಷವಾಗಿ ಗಂಗಾವತಿ ತಾಲೂಕಿನಲ್ಲಿ ಅ. ಸುಂದರ (೧೯೭೩ : ೬೫ - ೬೬) ಅವರು ನೂತನ ಶಿಲಾಯುಗ ಸಂಸ್ಕೃತಿಯ ಇನ್ನಷ್ಟು ನೆಲೆಗಳನ್ನು ಶೋಧಿಸಿದರು. ಅವು ಹೇರೂರು, ಕೆಸರಟ್ಟಿ, ಗೋನ್ನಾಳ, ಆರಾಳ್, ಹಿರೇಂತಕಲ್, ಜಂಗಮರಕಲ್ಲುಡಿ, ಹೊಸಕೇರೆ, ಹೆಬ್ಬಾಳ, ಸೋಮನಾಳ ಈ ಗ್ರಾಮಗಳ ನೆಲೆಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಬೂದುವರ್ಣದ ಮೃತಪಾತ್ರೆಯ ಚೂರುಗಳು, ಅಪರೂಪವಾಗಿ ಉತ್ತಮ ಜಾತಿಯ ಚಕಮಕಿ ಕಲ್ಲಿನ ಬ್ಲೇಡಿನಂತಹ ಚಕ್ಕೆಗಳ ಸಣ್ಣ ಸಣ್ಣ ಆಯುಧಗಳು ತಿಕ್ಕಿ ನಯ ಮಾಡಿದ ಮೈಯುಳ್ಳ ಕಲ್ಲಿನ ಕೊಡಲಿಗಳು ಅವಶೇಷಗಳು ಪ್ರಾಣಿಗಳ ಎಲುಬುಗಳು ಇವೆ. ಈ ನೆಲೆಗಳು ಈ ಭಾಗದಲ್ಲಿ ನೂತನ ಶಿಲಾಯುಗದ ವಾಸ್ತವ್ಯದ ಸಾಂದ್ರತೆಯನ್ನು ಪ್ರಸಾರವನ್ನು ತಿಳಿಯಲು ಸಹಾಯಕವಾಗುತ್ತದೆ.

**ಸಂಸ್ಕೃತಿಯ ಸ್ವರೂಪ :**

ಈ ಮೇಲಿನಂತೆ ನವ ಶಿಲಾಯುಗದ ಸಂಸ್ಕೃತಿ ನೆಲೆಗಳ ಸ್ಥೂಲ ವಿವೇಚನೆಯಿಂದ ನಮಗೆ ಗಂಗಾವತಿ ಪ್ರದೇಶದಲ್ಲಿ ಈ ಸಂಸ್ಕೃತಿಯ ಯಾವ ರೀತಿ ಬೆಳೆದುಬಂದಿತ್ತು ಎನ್ನುವುದು ತಿಳಿದುಬರುತ್ತದೆ. ಒಟ್ಟಾರೆ ಸಂಗ್ರಹಿಸಿ ಈ ಸಂಸ್ಕೃತಿಯ ಸ್ವರೂಪವನ್ನು ಹೀಗೆ ಹೇಳಬಹುದು. ಈ ಯುಗದ ಜನರ ಜೀವನ ಸರಳವಾಗಿತ್ತು. ಇವರು ಹೆಚ್ಚಾಗಿ ನದಿ ಹಳ್ಳಗಳ ದಂಡೆಗಳ ಮೇಲೆ ಹುಲ್ಲು ಸೊಪ್ಪು, ಕಟ್ಟಿಗೆಗಳಿಂದ ನಿರ್ಮಿಸಿದ ಮನೆಗಳಲ್ಲಿ ವಾಸಿಸುತ್ತಿದ್ದರು. ತಮಗೆ ಬೇಕಾದ ಆಯುಧಗಳನ್ನು ಕರಿಕಲ್ಲು ಮತ್ತು ಚಕಮಕಿ ಕಲ್ಲಿನಲ್ಲಿ ಮಾಡುತ್ತಿದ್ದರು. ಕರಿಕಲ್ಲಿನಲ್ಲಿ ಕೊಡಲಿ ಬಾಚಿ, ಉಳಿ, ಕಾಲುಂಗುರ ಇವುಗಳನ್ನು ಚಕಮಕಿ ಕಲ್ಲಿನಲ್ಲಿ ನೀಳವಾದ ಹರಿತವಾದ ಬದಿಯುಳ್ಳ ಆಯುಧಗಳನ್ನು ಮಾಡುತ್ತಿದ್ದರು. ನಿತ್ಯ ಬಳಕೆಗೆ ಬೇಕಾದ ಪಾತ್ರೆಗಳನ್ನು ಮಣ್ಣಿನಿಂದಲೇ ತಯಾರಿಸುತ್ತಿದ್ದರು. ಇವುಗಳಲ್ಲಿ ಉಬ್ಬಿದ ಹೊಟ್ಟೆಯುಳ್ಳ ಕೊಡಗಳು, ತಟ್ಟೆ, ಅರ್ಧಗೋಲಾಕೃತಿಯ ಪಾತ್ರೆಗಳು ಮುಖ್ಯವಾದವು. ಇವು ಬೂದು ಮತ್ತು ಕೆಂಪು ಬಣ್ಣದಾಗಿರುತ್ತದ್ದವು. ಕೆಲ ಪಾತ್ರೆಗಳ ಮೇಲೆ ಪ್ರಾಣಿ ಪಕ್ಷಿಗಳ ರೇಖಾ ಚಿತ್ರಗಳಿರುತ್ತಿದ್ದವು.

ಈ ಜನರು ಆಹಾರಕ್ಕಾಗಿ ಭತ್ತ, ಹುರುಳಿ, ಗೋಧಿ ಬೆಳೆಯುತ್ತಿದ್ದರು. ಜೊತೆಗೆ ಮಾಂಸವನ್ನು ಆಹಾರಕ್ಕಾಗಿ ಉಪಯೋಗಿಸುತ್ತಿದ್ದರು. ಮೀನುಗಾರಿಕೆ, ಬೇಟೆ, ಪ್ರಾಣಿಗಳನ್ನು ಸಾಕುವುದು ಇವರ ಕಸುಬಾಗಿದ್ದವು. ಅಲಂಕಾರ ಪ್ರಿಯಾರಾಗಿದ್ದ ಇವರು ಮಣಿಗಳ ಸರ ಕಿವಿಯೋಲೆ, ಬಳೆ, ಉಂಗುರ ಧರಿಸುತ್ತಿದ್ದರು. ಇವರು ಮಣ್ಣಿನಿಂದ ಗೊಂಬೆಗಳನ್ನು ತಯಾರಿಸುತ್ತಿದ್ದರು. ಅವುಗಳಲ್ಲಿ ದನ ಮತ್ತು ಸ್ತ್ರೀ ಗೊಂಬೆಗಳು ಹೆಚ್ಚು ಸಿಕ್ಕಿದೆ. ಸತ್ತವರನ್ನು ಹೊರಗಡೆ ಹುಗಿಯುವುದರಲ್ಲದೆ ಕೆಲವು ವೇಳೆ

ಮನೆಗಳಲ್ಲಿಯೇ ಹುಗಿಯುತ್ತಿದ್ದರು. ಇವರು ಅಲ್ಪಮಟ್ಟಿಗೆ ತಾಮ್ರ ಮತ್ತು ಕಂಚುಗಳ ವಸ್ತುಗಳನ್ನು ಉಪಯೋಗಿಸುತ್ತಿದ್ದುದು ಆದರೆ ಕಬ್ಬಿಣದ ಯಾವುದೇ ವಿಧದ ವಸ್ತುಗಳನ್ನು ಉಪಯೋಗಿಸುತ್ತಿದ್ದುದು ತಿಳಿದುಬಂದಿಲ್ಲ ಈ ಜನರು ಉತ್ತರದ ಗೋದಾವರಿ ಪ್ರದೇಶದಲ್ಲಿಯ, ದಕ್ಷಿಣದ ಕಾವೇರಿ ನದಿ ಬಯಲು ಪ್ರದೇಶದಲ್ಲಿನ ಸಮಕಾಲೀನ ಜನರೊಡನೆ ಸಂಪರ್ಕವನ್ನು ಹೊಂದಿದ್ದರು.

ಒಟ್ಟಾರೆ ಈ ಸಂಶೋಧನೆಗಳಿಂದ ಈ ಪ್ರದೇಶದಲ್ಲಿ ಒಂದು ಸಾಧಾರಣ ಗ್ರಾಮ ಜೀವನ ಪದ್ಧತಿ ಸುಮಾರು ೩೦೦೦ ವರ್ಷಗಳ ಹಿಂದೆಯೇ ಚೆನ್ನಾಗಿ ಬೆಳೆದಿತ್ತು ಎಂಬುದು ಸ್ಪಷ್ಟವಾಗಿದೆ. ಆದರೂ ಕೂಡ ಈ ಜನರ ಗವಿವರ್ಣದ ಚಿತ್ರಗಳು ಹಾಗೂ ಮಣ್ಣಿನ ಗೊಂಬೆಗಳನ್ನು ಪರಿಶೀಲಿಸಿದಲ್ಲಿ ಒಬ್ಬ ಉತ್ತಮ ಕಲಾವಿದನಲ್ಲಿರುವ ಸೂಕ್ಷ್ಮ ಪರಿಶೀಲನೆ, ಸಂವೇದನೆ, ನೈಜತೆಯ ಗ್ರಹಣ ಶಕ್ತಿ ಮತ್ತು ಸರಳ ರೇಖೆಗಳಲ್ಲಿಯೇ ಮಾರ್ಮಿಕವಾಗಿ ಇವೆಲ್ಲವನ್ನು ಪ್ರತಿಬಿಂಬಿಸುವ ಕಲಾಪ್ರೌಢಿಮೆಯನ್ನು ಚೆನ್ನಾಗಿ ಬೆಳೆಸಿಕೊಂಡು ಮುಂದಿನ ಪೀಳಿಗೆಗಳ ಕಲಾಭಿಜ್ಞಗೆ ಬಲವಾದ ಮತ್ತು ಸರಿಯಾದ ಒಂದು ಬುನಾದಿಯನ್ನು ಹಾಕಿದ್ದರೆಂದು ಹೇಳಬಹುದು.

ಆದ್ದರಿಂದ ಮಾನವನ ಸಾಂಸ್ಕೃತಿಕ ಇತಿಹಾಸದಲ್ಲಿ ಇದು ಒಂದು ಮಹತ್ವದ ಕೊಡುಗೆ. ಇನ್ನೊಂದು ಮುಖ್ಯಾಂಶವೆಂದರೆ ಲೋಹ ತಂತ್ರಜ್ಞಾನ ತಾಮ್ರ ಇಲ್ಲವೆ ಕಂಚಿನ ವಸ್ತುಗಳ ಬಳಕೆಯಿಂದ ಇವರಿಗೆ ತಾಮ್ರ ಅದಿರಿನ ನಿಕ್ಷೇಪ ಗುರುತಿಸುವಿಕೆ ಅದಿರು ಸಂಗ್ರಹಣಾ ಅದರಿಂದ ತಾಮ್ರ ಲೋಹವನ್ನು ತಯಾರಿಸುವುದು ಮೊದಲಾದ ಕ್ಲಿಷ್ಟ ತಾಂತ್ರಿಕತೆಯನ್ನು ಪ್ರಥಮ ಬಾರಿಗೆ ಹುಟ್ಟುಹಾಕಿ ಬೆಳೆಸಿದ ಸಾಧನೆ ಈ ಜನರಿಗೆ ಸೇರುತ್ತದೆ.

**೬. ಕಬ್ಬಿಣಯುಗದ ಬೃಹತ್ ಶಿಲಾಸಂಸ್ಕೃತಿ (ಕ್ರಿ.ಪೂ. ೯೦೦ - ೨೦೦) :**

ಈ ಸಂಸ್ಕೃತಿಯ ಜನರ ವೈಶಿಷ್ಟ್ಯವೆಂದರೆ ಸತ್ತವರ ಸಂಸ್ಕಾರ ಮಾಡುವ ಕ್ರಮ. ನೈಸರ್ಗಿಕವಾಗಿ ದೊರೆಯುವ ಒರಟಾದ ದೊಡ್ಡ ದೊಡ್ಡ ಕಲ್ಲುಬಂಡೆಗಳನ್ನು ಉಪಯೋಗಿಸಿ ಗೋರಿಗಳನ್ನು ಕಟ್ಟುತ್ತಿದ್ದರು. ಈ ಗೋರಿಗಳಲ್ಲಿ ಶವದ ಅವಶೇಷಗಳನ್ನು ಗಡಿಗೆ ಮಡಿಕೆಗಳನ್ನು ಕಬ್ಬಿಣದ ಉಪಕರಣಗಳನ್ನು ಇಟ್ಟು ಮುಚ್ಚುತ್ತಿದ್ದರು. ಈ ಜನರ ವಾಸದ ನೆಲೆಗಳ ಸಮೀಪ ಇಂಥ ನೂರಾರು ಕಲ್ಗೋರಿಗಳು ಕಂಡುಬರುತ್ತವೆ. ಈ ಜನರು ಕಬ್ಬಿಣದ ಉಪಯೋಗವನ್ನು ಅರಿತಿದ್ದರು. ಕಬ್ಬಿಣದ ಆಯುಧಗಳನ್ನು ಮತ್ತು ಸಲಕರಣೆಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಆದ್ದರಿಂದ ಇವರ ಸಂಸ್ಕೃತಿಯನ್ನು ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ ಎಂದು ಕರೆಯಲಾಗಿದೆ.

ಗಂಗಾವತಿ ಪ್ರದೇಶಕ್ಕೆ ಸಂಬಂಧಿಸಿದಂತೆ ಮಸ್ಕಿ ಸಂಗನಕಲ್ಲು ಮತ್ತು ಹಿರೇಬೆನಕಲ್‌ಗಳಲ್ಲಿ ಈ ಸಂಸ್ಕೃತಿಯ ಕಲ್ಗೋರಿಗಳು ಕಂಡುಬಂದಿವೆ. ಸಂಗನಕಲ್ಲು ಮತ್ತು ಮಸ್ಕಿಯಲ್ಲಿ ಈ ಸಂಸ್ಕೃತಿಯ ನಾಲ್ಕು ರೀತಿಯ ಶವ ಗುಂಡಿಗಳನ್ನು ಉತ್ಖನನ ಮಾಡಲಾಗಿದೆ. ಇದರಿಂದ ಗಂಗಾವತಿ ಪ್ರದೇಶದಲ್ಲಿ ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ಬಗ್ಗೆ ತಿಳಿದುಬರುತ್ತದೆ.

ಮಸ್ಕಿ ಸಂಗನಕಲ್ಲು ಮತ್ತು ಹಿರೇಬೆನಕಲ್‌ಗಳಲ್ಲದೆ ಗಂಗಾವತಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಅ. ಸುಂದರ (೧೯೭೩ : ೬೭) ಅವರು ಇಷ್ಟಪ್ಪು ನೆಲೆಗಳನ್ನು ಶೋಧಿಸಿದ್ದಾರೆ. ಅವುಗಳೆಂದರೆ. ತಿಪ್ಪನಾಳ್.

ಗೂಡೂರ್, ಬಸರಿಹಾಳ, ಜಿರಾಳ್, ಕಲ್ಲುಗುಡಿ, ಬಂಡರ್‌ಹಾಳ, ಗಡ್ಡಿ ಮತ್ತು ಚಿಕ್ಕಮಾದಿನಾಳ್ ಈ ಗ್ರಾಮಗಳ ನೆಲೆಗಳಲ್ಲಿ ದುಂಡು ಕಟ್ಟೆಗಳು ಶವ - ಕುಣಿಗಳು ಮತ್ತು ಕಂಡಿಕೋಣೆ ಗೋರಿಗಳೆಂದು ಮೂರು ವಿಧವಾದ ಬೃಹತ್ ಶಿಲಾಗೋರಿಗಳು ಕಂಡುಬರುತ್ತವೆ. ಇವು ಮಸ್ಕಿಯ ಬೃಹತ್ ಶಿಲಾಗೋರಿಗಳಿಗೆ ಹೋಲುತ್ತವೆ. ಮತ್ತು ಈ ನೆಲೆಗಳಲ್ಲಿ ಹೊಳಪಾದ ಕಪ್ಪು ಕೆಂಪು ಬಣ್ಣದ ಮಡಿಕೆ ಚೂರುಗಳು ಕಬ್ಬಿಣದ ಉಪಕರಣದ ಅವಶೇಷಗಳು ಮಾನವ ಅಸ್ತಿಯ ಚೂರುಗಳು ಕಂಡುಬರುತ್ತವೆ. ಕೆಲವು ನೆಲಗಳಲ್ಲಿ ನೂತರ ಶಿಲಾಯುಗದ ಜನರು ಇದ್ದಂತೆಯೇ ತಮ್ಮ ವಿಶಿಷ್ಟ ಪರಂಪರೆಯೊಡನೆ ಈ ಜನರು ಬಂದು ಅವರೊಡನೆ ನೆಲೆಸಿದರೆಂಬುದಕ್ಕೆ ಸಾಕ್ಷ್ಯಗಳು ದೊರೆತಿವೆ. ಮತ್ತು ಈ ಜನರ ವಿಶಿಷ್ಟ ಪರಂಪರೆಯು ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ಆದಿ ಹಂತದಲ್ಲಿ ಕೊನೆಗೊಂಡಂತೆ ತಿಳಿದುಬಂದಿದೆ. ಆದ್ದರಿಂದ ಈ ಸಂಸ್ಕೃತಿಯ ಕಾಲಮಾನವನ್ನು ಸು. ಕ್ರಿ.ಪೂ. ೮ನೆಯ ಶತಮಾನದಿಂದ ೨ನೆಯ ಶತಮಾನದವರೆಗೆ ಎಂದು ತರ್ಕ ಮಾಡಲಾಗಿದೆ.

**ಸಂಸ್ಕೃತಿಯ ಸ್ವರೂಪ :**

ಕಬ್ಬಿಣ ಯುಗದ ಬೃಹತ್ ಶಿಲಾಸಂಸ್ಕೃತಿಯ ಜನ ನೂತನ ಶಿಲಾಯುಗದ ಜನರಗಿಂತ ಹೆಚ್ಚಿನ ಪ್ರಗತಿ ಸಾಧಿಸಿದ್ದರು. ಇವರು ಜೀವನ ವೈಶಿಷ್ಟ್ಯವೆಂದರೆ ಶವ ಸಂಸ್ಕಾರ ಕ್ರಮವಾಗಿದೆ.

ದೊಡ್ಡ ಕಲ್ಲು ಬಂಡೆಗಳಿಂದ ಗೋರಿಗಳನ್ನು ನಿರ್ಮಿಸುತ್ತಿದ್ದರು. ನೀರಿನ ಸೌಕರ್ಯವುಳ್ಳ ಪ್ರದೇಶಗಳಲ್ಲಿ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು.

ಇವರ ಎಲ್ಲಾ ಆಯುಧ ಮತ್ತು ಸಲಕರಣೆಗಳು ಕಬ್ಬಿಣದ್ದಾಗಿದ್ದವು. ಕತ್ತಿಗಳು ಕೊಡಲಿ, ಬಾಚಿ, ಈಟಿ, ಬಾಣ, ತಾಮ್ರದ ಗಂಟೆ ಸಾಮಾನ್ಯವಾಗಿದ್ದವು. ಇವರು ಹೆಚ್ಚಾಗಿ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುತ್ತಿದ್ದು ಅವು ಒಳಭಾಗ ಮತ್ತು ಹೊರಮೈಯ ಮೇಲ್ಭಾಗದಲ್ಲಿ ಅಚ್ಚುಕಟ್ಟಾಗಿ ಒಳ್ಳೆಯ ಹೊಳಪಿನಿಂದ ಕೂಡಿದ ಕೆಳಭಾಗ ಕೆಂಪು ಬಣ್ಣದಲ್ಲಿರುತ್ತಿದ್ದವು. ಇವುಗಳಲ್ಲಿ ದೊಡ್ಡ ಗುಡಾಣ ಹರವಿ, ಬಾನಿ, ಕೊಡ, ತಟ್ಟೆ, ಲೋಟ ಮುಖ್ಯವಾಗಿದ್ದವು. ಇವರ ವ್ಯವಸಾಯ ಸುಧಾರಿಸಿದ್ದಿತು. ಗದ್ದೆಗಳಲ್ಲಿ ಭತ್ತ, ರಾಗಿ ಬೆಳೆಯುತಿದ್ದರು. ಅಷ್ಟೇನು ಅಲಂಕಾರ ಪ್ರಿಯರಲ್ಲದ ಇವರು ಸುಟ್ಟು ಮಣ್ಣಿನ ಉತ್ತಮ ಜಾತಿಯ ಕಲ್ಲಿನ ಮತ್ತು ತಾಮ್ರದ ಚಿನ್ನದ ಮಣಿಗಳ ಸರ, ಬಳೆ, ಕಿವಿಯೋಲೆಗಳನ್ನು ಧರಿಸುತ್ತಿದ್ದರು.

ಇವರು ನೂತನ ಶಿಲಾಯುಗದ ಜನರ ಹಾಗೆ ಬಂಡೆಗಡಿಗೆಗಳಲ್ಲಿ ಚಿತ್ರಗಳನ್ನು ಬರೆಯುತ್ತಿದ್ದರು. ಹಿರೇಬೆನಕಲ್‌ನಲ್ಲಿ ಇಂಥ ಚಿತ್ರಗಳ ಗವಿಗಳಿವೆ. ಈ ಚಿತ್ರಗಳಲ್ಲಿ ಮುಖ್ಯವಾಗಿ ಕುದುರೆ ಸವಾರರ ಚಿತ್ರ ಗುಂಪು ಕುಣಿತದ ದೃಶ್ಯ ಅಲ್ಲದೆ ಜಿಂಕೆ, ಆಕಳು, ನವಿಲು ಕಂಡುಬರುತ್ತದೆ.

ಈ ಜನರ ಸಂಸ್ಕೃತಿಯು ಇವರ ಹಿಂದಿನ ನೂತನ ಶಿಲಾಯುಗದ ಜನರಂತೆ ಗ್ರಾಮ ಜೀವನ ಪದ್ಧತಿ ಇದ್ದರೂ ಕೂಡ ನಾಗರಿಕ ಸಂಸ್ಕೃತಿಗೆ ಪೀಠಿಕೆ ಹಾಕಿದವರು ಈ ಜನರೆಂದೇ ಹೇಳಬಹುದು. ಇದಕ್ಕೆ ಮುಖ್ಯ ಕಾರಣ ತಮ್ಮ ದೈನಂದಿನ ಕೆಲಸಕ್ಕೆ ಹಾಗೂ ತಮ್ಮ ರಕ್ಷಣೆಗೆ ಇವರು ಉಪಯೋಗಿಸುತ್ತಿದ್ದ ಕಬ್ಬಿಣ ಉಪಕರಣಗಳು ಮತ್ತು ಆಯುಧಗಳು ಅಷ್ಟೇ ಅಲ್ಲ ಕಬ್ಬಿಣ ಉಪಕರಣಗಳ ಹೆಚ್ಚಿನ ಬಳಕೆಯಿದ ಕ್ರಮೇಣವಾಗಿ ಕಲ್ಲಿನ ಉಪಕರಣಗಳನ್ನು ಮಾಡುವ ಅವಶ್ಯಕತೆ ಇಲ್ಲದಂತಾಗಿ ಶಿಲಾಯುಗ ಕೊನೆಗೊಂಡಿತು.

ಮತ್ತು ಕಬ್ಬಿಣದ ಉಪಕರಣಗಳು ಕಲ್ಲಿನ ಉಪಕರಣಗಳಿಗಿಂತ ಕೆಲಸಕ್ಕೆ ತುಂಬಾ ಪರಿಣಾಮಕಾರಿಯಾದುದರಿಂದ ಕಡಿಮೆ ಸಮಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ದೊಡ್ಡ ದೊಡ್ಡ ಕಾಡುಗಳನ್ನು ಬಯಲು ಮಾಡಿ ಹೆಚ್ಚು ಭೂಮಿಯನ್ನು ಕೃಷಿಗೆ ಅಳವಡಿಸಲು ಸಾಧ್ಯವಾಯಿತು. ಮತ್ತು ತಮಗೆ ಬೇಕಾದ ರೀತಿಯಲ್ಲಿ ಕೃಷಿ ಉಪಕರಣಗಳನ್ನು ಮಾಡಿಕೊಳ್ಳಲು ಅನುಕೂಲವಾಯಿತು. ಇದರಿಂದ ಉತ್ಪತ್ತಿ ಹೆಚ್ಚಾಗಿ ಆರ್ಥಿಕ ಪರಿಸ್ಥಿತಿಯು ಉತ್ತಮವಾಯಿತು. ಇವೆರಡು ರಾಜಕೀಯ ಪರಂಪರೆಗೆ ಬುನಾದಿಯನ್ನು ಹಾಕಿದವು. ಆದ್ದರಿಂದ ಮಾನವನ ಸಾಂಸ್ಕೃತಿಕ ಬೆಳವಣಿಗೆಯ ಇತಿಹಾಸದಲ್ಲಿ ಇದೊಂದು ಮುಖ್ಯ ಘಟ್ಟ.

**ಪ್ರಾಗೈತಿಹಾಸಿಕ ಕಾಲದ ಚಿತ್ರಗಳು :**

ಗಂಗಾವತಿ ಪ್ರದೇಶದಲ್ಲಿ ವಿಪುಲವಾಗಿ ಪ್ರಾಗೈತಿಹಾಸಿಕ ಕಾಲದ ಗವಿವರ್ಣ ಮತ್ತು ಬಂಡೆಗಲ್ಲು ಚಿತ್ರಗಳು ಇವೆ. ಮಸ್ಕಿ ಕಲ್ಲೂರ (ಲಿಯೋನಾರ್ಡ್ ಮನ್, ೧೯೩೪ - ೩೫) ಪಿಕ್ಲಿಹಾಳ, (ಅಲ್ಬಿನ್ ಎಫ್.ಆರ್ ೧೯೬೦ : ೧೧ - ೧೩) ಹಿರೇಬೆನಕಲ್ (ಲಿಯೋನಾರ್ಡ್‌ಮನ್ ೧೯೩೪ - ೩೪) ಮತ್ತು ಸುಂದರ ಅ ೧೯೭೪ ೨೧ - ೩೨ ಕೊಪ್ಪಳ ಬಿಳೆಭಾವಿ ಮಲ್ಲಾಪುರ, ಆನೆಗೊಂದಿ, ತಿಮ್ಮಲಾಪುರ, ನಾರಾಯಣಪುರ, ಬಂಡಿಹಲ್ಲಾಪುರ (ಎಲ್ಲವೂ ಗಂಗಾವತಿ ತಾಲೂಕು) ಮಾನ್ವಿ ಮುಂತಾದೆಡೆಗಳಲ್ಲಿ ವರ್ಣ ಚಿತ್ರಗಳು ಹಾಗೂ ತಾವರಗೇರಿ (ಕುಷ್ಟಗಿ ತಾಲೂಕು) (ಅ.ಸುಂದರ ೧೯೮೭ ೭ - ೮)ಯಲ್ಲಿ ಚಿತ್ರಗಳ ಶೋಧವಾಗಿವೆ.

ಈ ಎಲ್ಲಾ ಚಿತ್ರಗಳಿಗಿಂತ ಹಿರೇಬೆನಕಲ್ಲಿನ ಚಿತ್ರಗಳೇ ಹೆಚ್ಚು ವೈವಿಧ್ಯಮಯವಾಗಿಯೂ ವಿಫಲವಾಗಿಯೂ ಇವೆ. ಉಳಿದೆಡೆ ಅಷ್ಟೇನು ವಿಶೇಷತೆಯಿಂದ ಕೂಡಿಲ್ಲ. ಮತ್ತು ಉಳಿದೆಲ್ಲವು ಹಿರೇಬೆನಕಲ್ಲಿನ ಚಿತ್ರ ತರಹದ್ದೇ ಇರುವುದುರಿಂದ ಹಿರೇಬೆನಕಲ್ ಚಿತ್ರಗಳು ಬಗೆಗೆ ಸ್ವಲ್ಪ ವಿವರವಾಗಿ ಈ ಮುಂದೆ ಚರ್ಚಿಸಲಾಗಿದೆ.

**ಹಿರೇಬೆನಕಲ್ಲಿನ ಗುಹಾ ಚಿತ್ರಗಳು ಸುಂದರ ೧೯೭೪ ೧೯೯ ೨೦೧ :**

ಹಿರೇಬೆನಕಲ್ಲಿನಲ್ಲಿ ಇದೂವರೆಗೆ ೧೦ ಗವಿಗಳು ಶೋಧವಾಗಿದ್ದು ಅವುಗಳಲ್ಲಿ ೧,೨,೩ನೆಯ ಗವಿಗಳು ಲಿಯೋನಾರ್ಡ್ ಮನ್ (೧೯೩೪ - ೩೫)ರ ಶೋಧನೆ ಉಳಿದವುಗಳನ್ನು (ಸುಂದರ ೧೯೭೪ ೨೧ - ೩೨) ಅವರು ಶೋಧಿಸಿದ್ದಾರೆ. ಅಲ್ಲಿಯ ಗುಹಾ ಚಿತ್ರಗಳು ಇಂತಿದೆ.

೧ನೆಯ ಗುಹೆಯಲ್ಲಿರುವ ಚಿತ್ರಗಳು ಕೈ ಕೈ ಹಿಡಿದುಕೊಂಡು ಸಾಲಾಗಿ ನಿಂತ ಮನುಷ್ಯರು ಈಟಿ, ಕತ್ತಿ, ಕೊಡಲಿ, ಹಲ್ಲುಗಳುಳ್ಳ ಬಲ್ಲೆ ಮುಂತಾದ ಆಯುಧಗಳನ್ನು ಹಿಡಿದ ಕುದುರೆ ಸವಾರರ ಚಿತ್ರಗಳಿವೆ. ಜೊತೆಗೆ ಗೂಳಿಗಳ, ಆಕಳುಗಳ ಮತ್ತು ಚಿತ್ರಗಳಿವೆ.

೨ನೆಯ ಗುಹೆಯ ವರ್ಣ ಚಿತ್ರಗಳ ಗುಹೆಗಳಲ್ಲಿ ದೊಡ್ಡದಾಗಿದೆ. ಇಲ್ಲಿಯ ಚಿತ್ರಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲವಾದರೂ ಗುಡ್ಡ ಗಾಡಿನಲ್ಲಿ ಕರಡಿ(?)ಯಿಂದ ಹಿಂಬಾಲಿಸಲ್ಪಟ್ಟ ಒಬ್ಬ ಮನುಷ್ಯನ ಚಿತ್ರವಿದೆ. ಶಿಖರದ ತುದಿಯಲ್ಲಿ ಮತ್ತೊಬ್ಬ ನಿಂತು ಕೂಗುತ್ತಿರುವ ಹಾಗಿದೆ. ಇನ್ನೊಬ್ಬ ತನ್ನೆರಡು ಕೈಗಳನ್ನು ಅರ್ಧ ಮೇಲಕ್ಕೆತ್ತಿದ್ದಾನೆ.

೩ನೆಯ ಗುಹೆಯಲ್ಲಿ ೨ ಕೋಣೆಗಳಂತಿದ್ದು ಒಂದರ ಮೇಲಿನ ಬಂಡೆಯ ಮೇಲೆ ಬೆತ್ತಲೆ ಗಂಡಸಿನ ರೇಖಾಚಿತ್ರವಿದೆ. ಕಾಲು ಸೊಟ್ಟಗೆ ಮಾಡಿ ೨ ಕೈಗಳನ್ನು ಮೇಲಕ್ಕೆತ್ತಿದೆ. ಹಸ್ತಗಳನ್ನು ಕಣ್ಣು, ಕಿವಿಗಳನ್ನು ತೋರಿಸಿಲ್ಲ. ಮೈತುಂಬ ಅಡ್ಡ ಡೊಂಕು ಡೊಂಕಾದ ಕತ್ತರಿ ಗೆರೆಗಳ ತ್ರಿಕೋಣ ವಜ್ರಾಕೃತಿಗಳ ಚಿತ್ರಗಳಿವೆ.

ಮತ್ತೊಂದರಲ್ಲಿ ಮಧ್ಯ ರೇಖೆಗಳುಳ್ಳ ೨ ಚೌಕುಗಳು ೨ ಕುದುರೆಗಳು ಆನೆ, ಕತ್ತೆ ಅಥವಾ ನಾಯಿಯ ಚಿತ್ರಗಳಿವೆ.

೪ನೆಯ ಗುಹೆಯಲ್ಲಿ ನವಿಲು, ಚಿಗರಿ, ಮನುಷ್ಯರ ಸಾಲು, ನೃತ್ಯದ ನವಿಲಿನ ಚಿತ್ರಗಳಿವೆ.

೫ನೆಯ ಗುಹೆಯಲ್ಲಿ ಕುತೂಹಲಕಾರಿಯಾದ ನಿಂತ ಮನುಷ್ಯನ ಚಿತ್ರವಿದೆ. ತಲೆಗೆ ಕೋಡಿನಂತಹದನ್ನು ಮತ್ತು ಸೊಂಟದ ಹಿಂದೆ ಬಾಲವನ್ನು ಧರಿಸಿದೆ ಪ್ರಾಯಶಃ ಮಾಂತ್ರಿಕ ವಿಧಿಯಲ್ಲಿ ತೊಡಗಿರಬೇಕು. ಇದಲ್ಲದೆ ಡೊಂಕಾದ ಉದ್ದನೆಯ ಕೋಡುಗಳುಳ್ಳ ಚಿಗರಿಗಳು ನವಿಲು, ಗೂಳಿಗಳು ಒಂದಕ್ಕೊಂದು ಛೇದಿಸಿದ ವ್ಯಾಸಗಳ್ಳುಳ್ಳ ವೃತ್ತಗಳ ಚಿತ್ರಗಳಿವೆ.

೬ನೆಯ ಗುಹೆಯಲ್ಲಿ ಕುದುರೆ ಸವಾರರ ಸಾಲು, ನೃತ್ಯಗಾರರು, ಗಂಡು ನವಿಲು, ಕೆಚ್ಚಲುಳ್ಳ ಆಕಳುಗಳ, ಎತ್ತುಗಳ ಚಿತ್ರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿವೆ. ಒಬ್ಬ ಕುದುರೆಯ ಸವಾರನು ಬಿಲ್ಲಿಗೆ ಹೂಡಿದ ಬಾಣದಿಂದ ಚಿಗರಿಯನ್ನು ಹಿಡಿಯಲು ಪ್ರಯತ್ನಿಸುತ್ತಿರುವ ಇನ್ನೊಂದನ್ನು ಹುಲಿಯ ಕಡೆಗೆ ಹೊಡೆಯುತ್ತಿರುವ ರೀತಿಯಲ್ಲಿ ಇದೆ. (ಪುಟ ೨೦೧) ಇದಲ್ಲದೆ ೩ ಸಮಾನಾಂತರ ಗೆರೆಗಳು ಮತ್ತೊಂದು ೩ ಸಮಾನಾಂತರದ ಗೆರೆಗಳನ್ನು ೯೦°ಯಲ್ಲಿ ಕತ್ತರಿಸಿವೆ. ಇವುಗಳ ತುದಿಗಳನ್ನು ಎರಿಳಿತದ ಗೆರೆಯಿಂದ ಸೇರಿಸಿವೆ.

೭ನೆಯ ಗುಹೆಯಲ್ಲಿ ಎತ್ತುಗಳನ್ನು ನವಿಲುಗಳನ್ನು ಚಿತ್ರಿಸಲಾಗಿದೆ.

೮ನಯ ಗುಹೆಯಲ್ಲಿ ೨ ಹುಲಿಗಳ ೯ನೆಯ ಗುಹೆಯಲ್ಲಿ ಒಂದು ರೇಖಾ ಮತ್ತು ಒಂದು ಹುಲಿಯ ಚಿತ್ರಗಳಿವೆ. ೧೦ನೆಯ ಗುಹೆಯಲ್ಲಿ ಹಿಡಿಕೆಯುಳ್ಳ ಉದ್ದನೆಯ ಕತ್ತಿಗಳನ್ನು ಬಿಲ್ಲುಬಾಣಗಳನ್ನು ಹಿಡಿದುಕೊಂಡು ನಿಂತ ಮನುಷ್ಯರ ಚಿತ್ರಗಳಿವೆ.

**ವರ್ಣಚಿತ್ರಗಳ ಕಾಲಮಾನ :**

ಈ ಗವಿ ಬಯಲು ಬಂಡೆಗಲ್ಲು ಚಿತ್ರಗಳ ಬಳಿ ಸಾಮಾನ್ಯವಾಗಿ ಶಿಲಾ ತಾಮ್ರಯುಗ ಮತ್ತು ಬೃಹತ್ ಶಿಲಾಸಂಸ್ಕೃತಿಯ ಕಲ್ಗೋರಿಗಳ ನೆಲೆಗಳಿವೆ. ಈ ಚಿತ್ರಗಳ ಕಾಲವನ್ನು ಬಹುಶಃ ಶಿಲಾತಾಮ್ರಯುಗದ ಕೊನೆಯ ಹಂತ ಮತ್ತು ಬೃಹತ್ ಶಿಲಾಯುಗ (ಕ್ರಿ.ಪೂ. ಸು.೧೯೦೦ - ೮೦೦) ಸಂಸ್ಕೃತಿಯ ಆದಿ ಮಧ್ಯಭಾಗದ (ಕ್ರಿ.ಪೂ. ಸು. ೧೦೦೦ - ೫೦೦) ಕಾಲದದೆಂದು ನಿರ್ಣಯಿಸಬಹುದು.

ಈ ಮೇಲೆ ಸಂಕ್ಷಿಪ್ತವಾಗಿ ವಿವರಿಸಿದಂತೆ ಪ್ರಾಗೈತಿಹಾಸಿಕ ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವು ಪ್ರಾಚೀನ ಮಾನವನ ದಿನ ನಿತ್ಯದ ಜೀವನದಲ್ಲಿ ತಮಗೆ ಆಹಾರಕ್ಕಾಗಿ ಬೇಕಾದ ಪ್ರಾಣಿಗಳ ಭೇಟೆ ಮತ್ತು ತಮ್ಮ ವಂಶಾಭಿವೃದ್ಧಿಯ ಮೇಲೆ ಆಧಾರಿತವಾಗಿದೆ ಎಂಬುವುದನ್ನು ತಿಳಿಯಬಹುದು. ಈ ಚಿತ್ರಗಳು ತೀರಾ ಸರಳವೆನಿಸಿದರೂ ಅವು ವಿನ್ಯಾಸದ ಸಂಕೇತದಲ್ಲಿ ಸತ್ವ ಶೌಲಿಯಾಗಿವೆ. ಭಾಗಗಳ ಅಭಿವ್ಯಕ್ತಿಯಲ್ಲಿ ಪರಿಣಾಮಕಾರಿಗಳಾಗಿವೆ. ನಂತರದ ಕಾಲದಲ್ಲಿ ಬೆಳೆದ ಮೂರ್ತಿಶಿಲ್ಪದ ತಂತ್ರಗಳಿಗೆ ಈ ಲಕ್ಷಣಗಳೇ ಮೂಲಗಳಾಗಿವೆ. ಆದ್ದರಿಂದ ಚಿತ್ರಕಲೆಯ ಮೂಲ ಪರಂಪರೆಗೆ ಅಡಿಪಾಯವನ್ನು ಹಾಕಿದ ಕೀರ್ತಿ ಈ ಪ್ರಾಗೈತಿಹಾಸಿಕ ಮಾನವನಿಗೆ ಸಲ್ಲುತ್ತದೆ.

# ಅಧ್ಯಾಯ ಮೂರು

## ಇತಿಹಾಸ ಕಾಲ

(ಇತಿಹಾಸ ಪ್ರಾರಂಭ ಕಾಲದ ಸಂಸ್ಕೃತಿ ಕ್ರಿ.ಪೂ. ೩ನೆಯ ಕ್ರಿ.ಶ. ೩ನೆಯ ಶತಮಾನ) :

# ಅಧ್ಯಾಯ ಮೂರು

## ಇತಿಹಾಸ ಕಾಲ

**(ಇತಿಹಾಸ ಪ್ರಾರಂಭ ಕಾಲದ ಸಂಸ್ಕೃತಿ ಕ್ರಿ.ಪೂ. ೩ನೆಯ ಕ್ರಿ.ಶ. ೩ನೆಯ ಶತಮಾನ) :**

ಗಂಗಾವತಿ ಪ್ರದೇಶವು ಕ್ರಿ.ಪೂ. ೪ - ೩ನೆಯ ಶತಮಾನದ ಹೊತ್ತಿಗೆ ಮೌರ್ಯ ಸಾಮ್ರಾಜ್ಯದಲ್ಲಿ ಸೇರಿಹೋಗಿದ್ದಿತು. ಇದಕ್ಕೆ ಸಾಕ್ಷಿಯಾಗಿ ಈ ಪ್ರದೇಶದ ಗವಿಮಠ ಪಾಲ್ಕಿಗುಂಡು (ಕೊಪ್ಪಳ) (ಟರ್ನರ್ ಆರ್.ಎಲ್. ೧೯೩೨) ಮಸ್ಕಿ (ಹುಲ ಇ. ೧೯೨೫ : ೧೭೪ - ೧೭೫) ನಿಟ್ಟೂರ ಶೆಟ್ಟರ್ ಎಸ್ ಮತ್ತು ರಾಜಶೇಖರ್ ಎಸ್ ೧೯೭೭ : ೧೩೯) ಎದೆಗೊಲ್ಲ (ಸಂಯುಕ್ತ ಕರ್ನಾಟಕ ದೈನಿಕ ೬.೩.೧೯೬೮ : ೧) ಮತ್ತು  ಗಂಗಾವತಿ ಪ್ರದೇಶದ ಉತ್ತರಕ್ಕೆ ಸನ್ನತಿ (ಶರ್ಮ ಎ.ಕೆ. ಮತ್ತು ಇತರರು ೧೯೮೯ ೨ - ೧೫ ಮತ್ತು ೧೯೮೯ : ೪೦೩ - ೪೧೭) ಹಾಗೂ ದಕ್ಷಿಣಕ್ಕೆ ಬ್ರಹ್ಮಗಿರಿ ಅಶೋಕನ ಶಾಸನಗಳು (ಹುಲಿ ಇ. ೧೯೨೫ : ೧೭೫ - ೧೮೦) ದೊರೆತಿವೆ. ಈ ಎಲ್ಲಾ ಸ್ಥಳಗಳ ಮಧ್ಯ ಗಂಗಾವತಿಪ್ರದೇಶ ಇರುವುದರಿಂದ ಅದು ನಿಸ್ಸಂದೇಹವಾಗಿ ಮೌರ್ಯ ಸಾಮ್ರಾಜ್ಯದ ಭಾಗವಾಗಿತ್ತೆಂದು ಹೇಳಬಹುದು.

**ಕನಕಗಿರಿ ಮೌರ್ಯರ ದಕ್ಷಿಣ ಪ್ರಾಂತ್ಯದ ರಾಜಧಾನಿ :**

ಕನಕಗಿರಿಯನ್ನೇ ಮೌರ್ಯ ಸಾಮ್ರಾಜ್ಯದ ದಕ್ಷಿಣ ಪ್ರಾಂತದ ರಾಜಧಾನಿ ಎಂದು ಗುರುತಿಸಲಾಗಿದೆ. ಏಕೆಂದರೆ ಅಶೋಕನ ಬ್ರಹ್ಮಗಿರಿ ಶಾಸನಗಳು ಸುವಂಣಗಿರೀತೇ ಆಯತ ಪುತಸ ಮಹಾಮಾತಣಾಂಚ ವಚನೇನ ಇಸಲಸಿ ಮಹಾಮಾತಾ ಆರೋಗಿಯಂ ಎತವಿಯಾ ಹೇವಾ ಚ ವಚನೇನ ಇಸಿಲಸಿ ಎಂಬುದಾಗಿ ಪ್ರಾರಂಭಗೊಳ್ಳುತ್ತವೆ. ಅಂದರೆ ಈ ಶಾಸನಗಳು ಅಶೋಕನು ತನ್ನ ಸಾಮ್ರಾಜ್ಯದ ದಕ್ಷಿಣ ಪ್ರಾಂತದ

ಉಪರಾಜಧಾನಿಯಾಗಿದ್ದಿರಬಹುದಾದ ಸುವರ್ಣಗಿರಿಯಲ್ಲಿ ಇದ್ದು ಆರ್ಯಪುತ್ರ ಹಾಗೂ ಸುವರ್ಣಗಿರಿ ಮಹಾಮಾತ್ರರಿಗೆ ನಿರೂಪಿಸಲಾದಂತಹ ಇದರಿಂದ ಸುವರ್ಣಗಿರಿ ಮೌರ್ಯ ಸಾಮ್ರಾಜ್ಯದ ಮುಖ್ಯ ಆಡಳಿತ ಕೇಂದ್ರಗಳಲ್ಲಿ ಒಂದಾಗಿತ್ತೆಂದು ಸ್ಪಷ್ಟವಾಗುತ್ತದೆ. ಆದರೆ ಇಲ್ಲಿಯ ಸುವರ್ಣಗಿರಿಯನ್ನು ಗುರುತಿಸುವಲ್ಲಿ ವಾದ ವಿವಾದಗಳಿವೆ. ಹುಲಿ (೧೯೨೫ : ೧೭೭) ರವರು ಕನಕಗಿರಿ ಸುವರ್ಣಗಿರಿಯೆಂದು ವಾದಿಸುತ್ತಾರೆ. ಇವರ ವಾದದಲ್ಲಿ ಹುರುಳಿಲ್ಲ ಏಕೆಂದರೆ ಈ ಮೇಲೆ ನೋಡಿದಂತೆ ಗಂಗಾವತಿಯ ಸುತ್ತಲಿನ ಸ್ಥಳಗಳಲ್ಲಿ ಅಶೋಕನ ಶಾಸನಗಳು ದೊರೆತಿವೆ. ಅಲ್ಲದೆ ಕನಕಗಿರಿಯನ್ನು ಒಂದೆ ಸ್ವರ್ಣಗಿರಿ ಎಂತಲೂ ಕೂಡ ಹೆಸರಿತ್ತು ಎನ್ನುವುದು ಈ ಮೊದಲೇ ನೋಡಿದಂತೆ "ಸ್ಕಾಂದ ಪುರಾಣದ" ತುಂಗಾಮಹಾತ್ಮೆಯ ಕನಕಾಚಲಪತಿ ಅಷ್ಟೋತ್ತ ಶತಮಾನ ಸ್ತೋತ್ರದಿಂದ ತಿಳಿಯುತ್ತದೆ. ಇಲ್ಲಿ ಈ ಸ್ತೋತ್ರವನ್ನು ಅಶ್ಯಶ್ರೀ ಸ್ವರ್ಣಾದ್ರೀಶಾಷ್ಟೋತ್ತರ ಶತಮಾನಸ್ತೋತ್ರವೆಂದು ಕನಕಾಚಲ ಲಕ್ಷ್ಮೀನರಸಿಂಹ ದೇವರನ್ನು ಧ್ಯಾಯೇತ್ಸ್ವರ್ಣಗಿರೀಶ್ವರಂ ಎಂದು ಹಾಗೂ ಸ್ವರ್ಣಶೈಲಾದಿಪ, ಸ್ವರ್ಣಪುರೀಂದ್ರ, ಸ್ವರ್ಣಾದ್ರಿನಾಥ, ಸ್ವರ್ಣಾದ್ರೀಶ ಎಂಬುದಾಗಿ ಸೂಚಿಸಲಾಗಿದೆ. ಅಲ್ಲದೆ ಕನಕಗಿರಿ ಶಾಸನವೊಂದರ ಕ್ರಿ.ಶ.೧೬೭೪ ಆರಂಭ ಶ್ಲೋಕ ಶ್ರೀಮತ್ಸ್ವರ್ಣಗಿರಿಶ್ಯ ನಾರಸಿಂಹಪ್ಪ ಶಾಸನಂ ಎಂಬುದಾಗಿ ಕೊನೆಗೊಳ್ಳುತ್ತದೆ. ಆದ್ದರಿಂದ ಕನಕಗಿರಿ ಅಶೋಕನ ಶಾಸನೋಕ್ತ ಸುವರ್ಣಗಿರಿ ಎಂದು ಊಹಿಸಲು ಬಲವಾದ ಅವಕಾಶವಿದೆ. ಅಲ್ಲದೆ ಈ ಸಂದರ್ಭದಲ್ಲಿ ಗಂಗಾವತಿಯ ಕ್ರಿ.ಶ. ೨ನೆಯ ಶತಮಾನದ ಹೊತ್ತಿಗೆ ವ್ಯಾಪಾರಿ ಕೇಂದ್ರವಾಗಿತ್ತೆಂದು ಹೇಳುವಲ್ಲಿ ಟಾಲಿಮಿಯ ಉಲ್ಲೇಖದ ಬಗ್ಗೆ ವಿವೇಚಿಸುವಾ

ಟಾಲಮಿಯ "ಜಿಯಾಗ್ರಫಿ" (ಸು. ಕ್ರಿ.ಶ. ೧೬೦) ಗ್ರಂಥದಲ್ಲಿ ಕಲ್ಲಿಗೇರಿಯಸ್ ಎಂಬ ಊರಿನ ಉಲ್ಲೇಖವಿದೆ. ಇದರ ಜೊತೆಗೆ ಮೊದೊಗೊಲ್ಲ ಎಂಬ ಮತ್ತೊಂದು ಊರಿನ ಉಲ್ಲೆಖವು ಇದೆ. ಮೊದೊಗೊಲ್ಲ ಈಗಿನ ರಾಯಚೂರ ಜಿಲ್ಲೆಯ ಲಿಂಗಸೂರ ತಾಲೂಕಿನಲ್ಲಿಯ ಮುದಗಲ್ ಎಂದು ಗುರುತಿಸಲಾಗಿದೆ. ಇದು ಬಹುಮಟ್ಟಿಗೆ ಸರಿ ಎಂದು ತೋರುವುದು ಆದರೆ ಕಲ್ಲಿಗೇರಿಯಸ್ - ಕೊಲ್ಲಗಿರಿ ಕೊಲ್ಲಾಪುರ ಎಂದು ತರ್ಕಿಸಲಾಗಿದೆ. (ಶ್ರೀ ಕಂಠಶಾಸ್ತ್ರಿ ಎಸ್. ೧೯೮೦ : ೬) ಆದರೆ ಈ ಗುರುತಿಸುವಿಕೆ ಸರಿ ಕಾಣುವುದಿಲ್ಲ. ಕಲ್ಲಿಗೇರಿಯಸ್ ಕೊಲ್ಲಾಪುರ ಆಗುವ ಸಾಧ್ಯತೆ ಕಡಿಮೆ ಇದರ ಬದಲು ಕಲ್ಲಿಗೇರಿಯಸ್ ಈಗಿನ ಕನಕಗಿರಿ ಎಂಬುದನ್ನು ಪರಿಶೀಲಿಸುವ "ಜಯಾಗ್ರಫಿಯಲ್ಲಿ" ಉಲ್ಲೇಖಿಸಿದ ಸ್ಥಳಗಳ ಅಕ್ಷಾಂಶ. ರೇಖಾಂಶಗಳನ್ನು ಕೊಡಲಾಗಿದೆ. ಇದರ ಪ್ರಕಾರ ಕಲ್ಲಿಗೇರಿಯಸ್ ಮತ್ತು ಮೊದೊಗೊಲ್ಲಗಳ ಅಕ್ಷಾಂಶ ರೇಖಾಂಶ ಕ್ರಮವಾಗಿ ೧೧೮° ೧೮° ಮತ್ತು ೧೧೯° ೧೮° ಇದೆ. ಈ ಅಕ್ಷಾಂಶ ರೇಖಾಂಶಗಳನ್ವಯ ಕಲ್ಲಿಗೇರಿಯಸ್ ಮತ್ತು ಮೊದೊಗೊಲ್ಲ ೨ ಅತ್ಯಂತ ಸಮೀಪದ ಸ್ಥಳಗಳೆಂದು ತಿಳಿಯುತ್ತದೆ. ಮತ್ತು ಈಗಿನ ಮುದಗಲ್ ಮತ್ತು ಗಂಗಾವತಿಯು ಕೂಡ ತೀರಾ ಸಮೀಪದಲ್ಲಿವೆ. ಆದರೆ ಕೊಲ್ಲಾಪುರ ಮುದಗಲ್‌ದಿಂದ ಬಹಳ ದೂರದಲ್ಲಿರುವುದರಿಂದ ಇಲ್ಲಿ ಉಲ್ಲೇಖಿತ ಅಕ್ಷಾಂಶ ಅದಕ್ಕೆ ಸರಿಹೊಂದಲಾರದು ಆದ್ದರಿಂದ ಕಲ್ಲಿಗೇರಿಯಸ್ - ಕೊಲ್ಲಾಪುರ ಎಂದು ಗುರುತಿಸುವುದು ಅಷ್ಟು ಸಮಂಜಸವಾಗಲಾರದು ಆದ್ದರಿಂದ ಎರಡೂ ಸ್ಥಳಗಳ ಸಮೀಪ - ಮತ್ತು ಅಕ್ಷಾಂಶ, ರೇಖಾಂಶಗಳ ಹೊಂದಾಣಿಕೆಯಿಂದ ಕಲ್ಲಿಗೇರಿಯಸ್ ಕನಕಗಿರಿ ಆಗಿರುವ ಸಾಧ್ಯತೆ ಹೆಚ್ಚು,

ಕನಕಗಿರಿ ಹೀಗಾಗಿ ಈ ಎಲ್ಲಾ ಸಂಗತಿಗಳನ್ನು ಗಮನದಲ್ಲಿರಿಸಿ ಗಂಗಾವತಿಯೇ ಅಶೋಕನ ಶಾಸನೊಕ್ತ ಸುವರ್ಣಗಿರಿ ಎಂದು ಹೇಳಬಹುದು.

ಗಂಗಾವತಿ ಪ್ರದೇಶದ ಮಸ್ಕಿಯ ಶಾಸನ ಶೋಧವು (೧೯೧೫) ಅಶೋಕನ ಶಾಸನಗಳ ಚರಿತ್ರೆಯಲ್ಲಿ ಮಹತ್ವದ ಘಟನೆಯಾಗಿದೆ. ದೇವನಾಂಪ್ರಿಯ ಪಿರಿಯದರ್ಶಿ ರಾಜಾ ಉಲ್ಲೇಖದೊಂದಿಗೆ ದೊರೆಯುತ್ತಿದ್ದ ಶಾಸನಗಳ ಕರ್ತೃ ಮೌರ್ಯ ಚಕ್ರವರ್ತಿ ಅಶೋಕನೇ ಎನ್ನುವುದಾಗಿ ಮೊದಲ ಬಾರಿಗೆ ತಿಳಿಸಿದ ಕೀರ್ತಿ ಮಸ್ಕಿ ಶಾಸನಕ್ಕೆ ಸಲ್ಲುತ್ತದೆ. ಈ ಶಾಸನದ ಸಾರ ಇಂತಿದೆ.

ಈಗಿ ಎರಡೂವರೆ ವರ್ಷಗಳಗಿಂತಲೂ ಹೆಚ್ಚೂ ಕಾಲ ನಾನು ಬುದ್ಧನ ಉಪಾಸಕನಾಗಿದ್ದೆನೆ. ಈಚೆಗೆ ಒಂದು ವರ್ಷಕ್ಕಿಂತಲೂ ಹೆಚ್ಚು ಕಾಲ ಸಂಘಕ್ಕೆ ಸೇರಿ ಧರ್ಮೋದ್ಯೋಗದಲ್ಲಿ ತೊಡಗಿದ್ದೇನೆ ಮೊದಲೂ ಜಂಬೂ ದ್ವೀಪದಲ್ಲಿ ಮಾನವರ ಹಾಗೂ ದೇವತೆಗಳ ಸಂಗಾಮ ಸಾಧ್ಯವಾಗುತ್ತಿರಲಿಲ್ಲ. ಈಗಅದು ಸಾಧ್ಯವಾಗಿದೆ. ಈ ಗುರಿಯನ್ನು ಶ್ರೀಮಂತ ಮಾತ್ರ ಸಾಧಿಸುತ್ತಾನೆ. ಎಂದಲ್ಲ ಬಡವನಾಗಲಿ ಬಲ್ಲಿದವನಾಗಲಿ ಧರ್ಮದಲ್ಲಿ ನಿರತರಾದರೆ ಇದನ್ನು ಪಡೆಯಬಹುದು.

ಈ ಪ್ರದೇಶದ ಉಳಿದೆಲ್ಲಾ ಶಾಸನಗಳ ಸಾರ ಸ್ವಲ್ಪ ಹೆಚ್ಚು ಕಡಿಮೆ ಇದೇ ರೀತಿ ಇದೆ. ಇಲ್ಲಿಯ ಅಶೋಕನ ಶಾಸನಗಳ ಇನ್ನೊಂದು ಮಹತ್ವದ ಅಂಶವೆಂದರೆ ಬಹುತೇಕ ಶಾಸನಗಳು ಅಶೋಕನ ಹೆಸರನ್ನು ಒಳಗೊಂಡಿದ್ದು ಮಸ್ಕಿಯಲ್ಲದೆ ನಿಟ್ಟೂರ ಮತ್ತು ಎದೆಗೊಲ್ಲಗಳಲ್ಲಿ ದೊರೆತ ೪ ಶಾಸನಗಳಲ್ಲಿಯೂ ಅವನ ಹೆಸರು ಉಲ್ಲೇಖಗೊಂಡಿದ್ದು ಗಮನಾರ್ಹ ಶಾಸನಗಳಷ್ಟೇ ಅಲ್ಲದೆ ಸಮಕಾಲೀನ ಪ್ರಾಚೀನ ನೆಲೆಗಳು ಗಂಗಾವತಿ ಪ್ರದೇಶದ ಹೇರೂರ್, ಹೊಸಕೇರೆ, ಸೋಮನಾಳ್ (ಸುಂದರ ಅ ೧೯೭೩ : ೬೮) ಮತ್ತು ಚಿಕ್ಕಮಾದಿನಾಳ (ಕಿಲ್ಲೆಗುಡ್ಡ)ಗಳಲ್ಲಿ ಕಂಡುಬಂದಿವೆ.

ಅಶೋಕನ ಶಾಸನಗಳು ಮತ್ತು ಪ್ರಾಚೀನ ನೆಲೆಗಳ ಅಧ್ಯಯನದಿಂದ ಇತಿಹಾಸ ಪ್ರಾರಂಭಕಾಲದ ಸಂಸ್ಕೃತಿಯು ತಿಳಿದುಬರುತ್ತದೆ. ರಾಜಕೀಯ ಸ್ಥಿರತೆ ಸಾಂಸ್ಕೃತಿಕ ಪ್ರಗತಿಯಿಂದ ಜನರ ಜೀವನಕ್ರಮ ಸುಧಾರಣೆ ಹೊಂದಿದ್ದಿತು ವಾಸಕ್ಕಾಗಿ ಗುಡಿಸಲುಗಳ ಜೊತೆಗೆ ಮನೆಗಳನ್ನು ನಿರ್ಮಿಸುತ್ತಿದ್ದರು. ಅಲ್ಲದೆ ದೇವಾಲಯಗಳನ್ನು ಭಾವಿಗಳನ್ನು ಕೂಡ ಕಟ್ಟಲಾರಂಭಿಸಿದರು. ಇವುಗಳ ನಿರ್ಮಾಣಕ್ಕೆ ಸುಟ್ಟ ಇಟ್ಟಿಗೆಗಳನ್ನು ಬಳಸುತ್ತಿದ್ದರು. ತಾಮ್ರ, ಕಬ್ಬಿಣ ಮುಂತಾದ ಲೋಹಗಳ ಬಳಕೆಗಳು ಅಧಿಕವಾಗಿದ್ದು ಕಪ್ಪು - ಕೆಂಪು, ಕೆಂಪು ಬಣ್ಣದ ವಿವಿಧಾಕಾರದ ಗಡಿಗೆ ಮಡಿಕೆಗಳು ಬಳಕೆಯಲ್ಲಿದ್ದವು. ಬಟ್ಟಲುಗಳ ಹೊರಮೈಯಲ್ಲಿ ಬಿಳಿ ಬಣ್ಣದ ರೇಖಾ ಚಿತ್ರಗಳಿಂದ ಅಲಂಕಾರಿಸುತ್ತಿದ್ದರು. ಈ ಕಾಲದಲ್ಲಿ ವ್ಯಾಪಾರ ಕುಶಲತೆ ಬೆಳೆದಿತ್ತು. ನಾಣ್ಯಗಳ ಚಲಾವಣೆ ಮತ್ತು ಬಳಕೆ ಇತ್ತು ಬ್ರಾಹ್ಮಲಿಪಿ ಬಳಕೆಯಲ್ಲಿದ್ದು ಪ್ರಾಕೃತ ಭಾಷೆ ಆಡುಭಾಷೆಯಾಗಿತ್ತು. ಹಿಂದೂ ಮತ್ತು ಬೌದ್ಧ ಧರ್ಮಗಳು ಪ್ರಚಾರದಲ್ಲಿದ್ದವು.

ಹೀಗೆ ಇತಿಹಾಸ ಪ್ರಾರಂಭ ಕಾಲದಲ್ಲಿ ಗಂಗಾವತಿ ಪ್ರದೇಶದ ಜನರು ಧರ್ಮ, ಕಲೆ, ವಾಣಿಜ್ಯ, ರಾಜಕೀಯ, ಆಡಳಿತ ಕ್ರಮದಲ್ಲಿ ವಿಶೇಷ ಪ್ರಗತಿವುಳ್ಳವರಾಗಿದ್ದು ನಾಗರಿಕತೆಯ ಹಂತದಲ್ಲಿದ್ದರು.

**ಶಾತವಾಹನರು :**

ಮೌರ್ಯರ ತರುವಾಯ ದಖಿನ್ ಪ್ರಸ್ಥಭೂಮಿಯಲ್ಲಿ ರಾಜ್ಯ ಸ್ಥಾಪನೆಯೊಂದಿಗೆ ಶಾತವಾಹನರು ಅಧಿಕಾರಕ್ಕೆ ಬಂದರು ಇವರು ಸು. ೩೫೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಶ್ರೀ ಕಾಕುಲಂ ಸನ್ನತಿ ಬನವಾಸಿ ಪೈಥಾನ್ ಇವರ ರಾಜಧಾನಿಗಲಾಗಿದ್ದವು. ಇವರ ಬಗ್ಗೆ ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ಕಂಡುಬಂದ ನೆಲೆ. ರಾಜ್ಯವು ಗೋದಾವರಿ ಮತ್ತು ಕೃಷ್ಣಾನದಿಗಳ ಬಯಲಿಗೆ ಹೆಚ್ಚು ಸೀಮಿತವಾಗಿದ್ದರೂ ಕೆಲವು ಪ್ರಬಲ ಅರಸರ ಆಳ್ವಿಕೆಯ ಅವಧಿಯಲ್ಲಿ ಶಾತವಾಹನ ಸಾಮ್ರಾಜ್ಯ ಬಂಗಾಳ ಕೊಲ್ಲಿಯಿಂದ ಅರಬ್ಬಿ ಸಮುದ್ರದವರೆಗೂ ವ್ಯಾಪಿಸಿತ್ತು. ಶಾತವಾಹನರು ಕರ್ನಾಟಕದ ಬಹುಭಾಗವನ್ನು ಆಳಿದ್ದಾರೆ. ಗಂಗಾವತಿ ಪ್ರದೇಶವು ಸಹ ಇವರ ಆಳ್ವಿಕೆಗೆ ಒಳಪಟ್ಟಿತ್ತೆಂದು ಈ ಪ್ರದೇಶಕ್ಕೆ ಸುತ್ತಮುತ್ತಲಿನ ಸ್ಥಳಗಳಲ್ಲಿ ದೊರೆತ ಸಮಕಾಲೀನ ಶಾಸನ ಮತ್ತು ಮೂರ್ತಿ ಶಿಲ್ಪಗಳಿಂದ ತರ್ಕಿಸಬಹುದು. ಶಾತವಾಹನರ ಶಾಸನಗಳು ಗಂಗಾವತಿಯಿಂದ ಉತ್ತರಕ್ಕೆ ಸುಮಾರು ೨೦೦ ಕಿ.ಮೀ. ದೂರದಲ್ಲಿ ಸನ್ನತಿ (ಎ.ಆರ್.ಆಯ್.ಇ : ೧೯೬೬ - ೬೭ ನಂ.ಬಿ ೨೦೩ - ೨೩೩) ನೈರುತ್ಯಕ್ಕೆ ಸುಮಾರು ೩೦೦ ಕಿ.ಮೀ. ದೂರದಲ್ಲಿ ಬನವಾಸಿ (ರಘುನಾಥ ಭಟ್ ಎಚ್.ಆರ್. ೧೯೭೭ : ೪) ಪಶ್ಚಿಮಕ್ಕೆ ಸು. ೧೮೦ ಕಿ.ಮೀ. ದೂರದಲ್ಲಿ ವಡಗಾಂವ್ - ಮಾಧವಪುರ (ಪಂಚಮುಖಿ ಆರ್.ಎಸ್. ೧೯೫೩ : ೨) ಹಾಗೂ ಸಮೀಪದ ಹಿರೇಹಡಗಲಿ (ಕ.ವಿ.ವಿ. ಸಂ.೧), ಕುರುಗೋಡು (ಕ.ವಿ.ವಿ. ಸಂ.೧), ಮ್ಯಾಕ್‌ಡೋಣಿ (ಕ.ವಿ.ವಿ. ಸಂ.೧)ಗಳಲ್ಲಿ ದೊರೆತಿವೆ. ಸನ್ನತಿಯ ಒಂದು ಶಾನದಲ್ಲಿ ರ ಇರೊ ಸಿರಿಸಾತ...... ಎಂದಿದೆ. ಇದರಿಂದ ಗುಲ್ಬರ್ಗಾ ಪ್ರಾಂತ ಶಾತವಾಹನರ ಆಳ್ವಿಕೆಗೆ ಒಳಪಟ್ಟಿರಬಹುದೆಂದು ಸಾಕ್ಷಿಯಾಗಿದೆ. ಇನ್ನು ಹಿರೇಹಡಗಲಿ ಮ್ಯಾಕ್ ಡೋಣಿ ಶಾಸನಗಳ ಪ್ರಕಾರ ಶಾತಹನಿರಟ್ಟಿ ಶಾತಹನಿಕರ ಎಂದು ನಿರ್ದೇಶಿಸಲಾದ ಗಂಗಾವತಿ ಪ್ರದೇಶಕ್ಕೆ ಸಮೀಪದ ಇಂದಿನ ಬಳ್ಳಾರಿ ಜಿಲ್ಲೆ ಶಾತವಾಹನರ ಮೂಲ : ನಿವಾಸವಾಗಿರಬೇಕೆಂದು ಅಭಿಪ್ರಾಯಪಡಲಾಗಿದೆ.

ಉತ್ಖನನಗೊಂಡ ಚಂದ್ರವಳ್ಳಿ, ವಡಗಾಂವ್ ಮಾಧವಪುರಗಳು ಶಾತವಾಹನರ ಕಾಲದ ನೆಲೆಗಳಾಗಿವೆ. ಗಂಗಾವತಿಗೆ ಸಮೀಪದ ಸೊಂಡೂರಿನಲ್ಲಿ ಶಾತವಾಹನರ ಕಾಲದ ಅಪೂರ್ವವಾದ ಯಕ್ಷನ ಮೂರ್ತಿಯೊಂದು ದೊರೆತಿದೆ. (ಸುಂದರ ಅ : ೧೯೮೬ : ೨೭೯ - ೮೪)

ಹೀಗೆ ಉತ್ತರದಲ್ಲಿ ಗುಲ್ಬರ್ಗಾ ಜಿಲ್ಲೆಯಿಂದ ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆಯವರೆಗೂ ಪಶ್ಚಿಮದಲ್ಲಿ ಕರಾವಳಿಯಿಂದ ಬಳ್ಳಾರಿ ಜಿಲ್ಲೆಯವರೆಗೂ ಆವೃತವಾಗಿದ್ದ ಶಾತವಾಹನ ಸಾಮ್ರಾಜ್ಯದಲ್ಲಿ ಗಂಗಾವತಿ ಪ್ರದೇಶ ಸೇರಿತ್ತು.

**ಕದಂಬರು :**

ಕದಂಬರು ಕರ್ನಾಟಕವನ್ನಾಳಿದ ಪ್ರಥಮ ಕನ್ನಡಿಗರು ಇವರು ಕ್ರಿ.ಶ. ಸು. ೩೪೫ರಲ್ಲಿ ಅಧಿಕಾರಕ್ಕೆ ಬಂದು ಕ್ರಿ.ಶ. ೫೪೦ರವರೆಗೂ ರಾಜ್ಯವಾಳಿದರು ಬನವಾಸಿ ಇವರ ರಾಜಧಾನಿ ತಾಳಗುಂದ ಶಾಸನದ ಪ್ರಕಾರ ಮಯೂರಶರ್ಮನು ಪಲ್ಲವರು ಎದುರು ಹಾಕಿಕೊಳ್ಳದೆ ಅವನಿಗೆ ಪಶ್ಚಿಮ ತೀರದಿಂದ ಮಲಪ್ರಭಾ ನದಿಯ (ಪ್ರೇಹಾರ) ವರೆಗಿನ ಪ್ರದೇಶವನ್ನು ಕೊಟ್ಟು ಅವನನ್ನು ರಾಜನೆಂದು ಮಾನ್ಯ ಮಾಡಿದರು. ಕದಂಬರಾಜ್ಯವು ಉತ್ತರದಲ್ಲಿ ಮಲಪ್ರಭಾ ನದಿಯ ಪ್ರೇಹಾರ ವರೆಗೂ ಪಶ್ಚಿಮದಲ್ಲಿ ಶ್ರೀ ಶೈಲದ ವರಗೂ

ವಿಸ್ತರಿಸಿತ್ತು. ಈ ವ್ಯಾಪ್ತಿಯಲ್ಲಿ ಗಂಗಾವತಿ ಪ್ರದೇಶವು ಸಮ್ಮಿಲನವಾಗುತ್ತದೆ. ಆದರೂ ಇಲ್ಲಿ ಕದಂಬರ ಆಳ್ವಿಕೆಯ ಕುರಿತಾಗಿ ಯಾವ ನೇರ ದಾಖಲೆಗಳು ದೊರೆತಿಲ್ಲ.

ಗಂಗಾವತಿ ಪ್ರದೇಶಕ್ಕೆ ಸಮೀಪದಲ್ಲಿರುವ ದೇವಿಹಾಳ್ ಮತ್ತು ಸೊಂಡೂರನಲ್ಲಿ ಕದಂಬರ ಕೀಲದ ೨ ಶಿಲ್ಪಗಳು ದೊರೆತಿವೆ. ಶಿರಹಟ್ಟಿ ತಾಲೂಕಿನ ದೇವಿಹಾಳ್‌ದಲ್ಲಿ ಮಹಿಷಾಸುರ ಮರ್ದಿನಿ (ಸುಂದರ ಅ : ೧೯೯೦ : ೨೨೨ - ೨೨೪) ಮತ್ತು ಬಳ್ಳಾರಿ ಜಿಲ್ಲೆಯ ಸೊಂಡೂರಿನಲ್ಲಿ ಅಪೂರ್ವವಾದ ವಿಷ್ಣು (೧೯೮೬ : ೨೭೯ - ೮೪)ವಿನ ವಿಗ್ರಹಗಳು ತಿಳಿಸುತ್ತದೆ.

ಹೀಗೆ ಶಾಸನಗಳಲ್ಲಿಯ ಉಲ್ಲೇಖ ಮತ್ತು ಸಮೀಪದ ಸ್ಥಳದಲ್ಲಿಯ ಸಮಕಲೀನ ಶಿಲ್ಪಗಳಿಂದ ಗಂಗಾವತಿ ಪ್ರದೇಶದಲ್ಲಿ ಕದಂಬರ ಆಳ್ವಿಕೆಯನ್ನು ತರ್ಕಿಸಬಹುದು.

**ಬಾದಾಮಿ ಚಾಲುಕ್ಯರು :**

ಬಾದಾಮಿ ಚಲುಕ್ಯರ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ಕರ್ನಾಟಕ ಇತಿಹಾಸದಲ್ಲಿ ಹೊಸ ಅಧ್ಯಾಯ ಆರಂಭವಾಯಿತು. ಚಲುಕ್ಯರ ಪ್ರಭುತ್ವ ಉತ್ತರದಲ್ಲಿ ನರ್ಮದಾ ತೀರದಿಂದ ದಕ್ಷಿಣದಲ್ಲಿ ಕಾವೇರಿ ಬಯಲಿನವರೆಗೂ ವ್ಯಾಪಿಸಿತ್ತು.

ಗಂಗಾವತಿ ಪ್ರದೇಶ ಚಲುಕ್ಯರ ಆರಂಭಿಕ ದೊರೆಗಳ ಕಾಲದಲ್ಲಿ ಅವರ ಆಧೀನಕ್ಕೆ ಒಳಪಟ್ಟ ಬಗ್ಗೆ ತಿಳಿದುಬರುವುದಿಲ್ಲ. ಆದರೆ ಪ್ರಸಿದ್ಧ ದೊರೆ ಇಮ್ಮಡಿ ಪುಲಿಕೇಶಿ ದಕ್ಷಿಣದ ಗಂಗ, ಕದಂಬ, ಪಲ್ಲವ, ಚೋಳ, ಕೊಂಕಣದ ಮೌರ್ಯರನ್ನು ಸೋಲಿಸಿ ದಕ್ಷಿಣಪಥದ ಮೇಲೆ ತನ್ನ ಏಕಸ್ವಾಮ್ಯವನ್ನು ಸಾಧಿಸಿದ ಇವನ ಸಾಮ್ರಾಜ್ಯ ಉತ್ತರದಲ್ಲಿ ನರ್ಮದಾ ತೀರದವರೆಗೂ ಪೂರ್ವದಲ್ಲಿ ಕಳಿಂಗದವರೂ ವಿಸ್ತರಿಸಿತ್ತು. ಈ ವಿಸ್ತಾರವಾದ ವ್ಯಾಪ್ತಿಯಲ್ಲಿ ಗಂಗಾವತಿ ಪ್ರದೇಶ ಸೇರಿತ್ತು.

ಪುಲಿಕೇಶಿ ಸಾವಿನೊಂದಿಗೆ ಕೈತಪ್ಪಿದ್ದ ರಾಜ್ಯವನ್ನು ಅವನ ಮಗ ಒಂದನೆಯ ವೀರ ವಿಕ್ರಮಾದಿತ್ಯನು ಪುನಃ ವಶಪಡಿಸಿಕೊಂಡು ಇಡಿ ದಕ್ಷಿಣಾಪಥದಲ್ಲಿ ಅಜೇಯನಾಗಿ ಮೆರೆದನು. ಇವನ ನಂತರ ಬಂದ ವಿನಯಾದಿತ್ಯ, ವಿಜಯಾದಿತ್ಯ, ಇಮ್ಮಡಿ ವಿಕ್ರಮಾದಿತ್ಯ ಮತ್ತು ಇಮ್ಮಡಿ ಕೀರ್ತಿವರ್ಮರ ಆಳ್ವಿಕೆಯ ಕಾಲದಲ್ಲಿ ಗಂಗಾವತಿ ಪ್ರದೇಶ ಚಲುಕ್ಯ ಸಾಮ್ರಾಜ್ಯದ ಭಾಗವಾಗಿತ್ತೆಂದು ಊಹಿಸಬಹುದು. ಕೊಪ್ಪಳ ತಾಲೂಕಿನ ಹಲ್ಗೆರಿ ಗ್ರಾಮದಲ್ಲಿ ದೊರೆತ ಚಲುಕ್ಯರ ಶಾಸನವೊಂದು (ದೇಸಾಯಿ ಪಿ.ಬಿ : ೧೯೫೬ : ೧) ವಿಜಯಾದಿತ್ಯನನ್ನು ಯುದ್ಧಮಲ್ಲ ಸತ್ಯಾಶ್ರಮ ಶ್ರೀ ಪೃಥ್ವಿವಲ್ಲಭ ಎಂದು ವರ್ಣಿಸುತ್ತದೆ.

ಇವು ಶಾಸನ ಕತೃಗಳ ಇಲ್ಲವೆ ವರ್ತಕರ ಹೆಸರುಗಳಾಗಿರಬಹುದು. ಈ ಶಾಸನವು ಕೊಪ್ಪಳದ ಬೆಟ್ಟದ ತುದಿಯಲ್ಲಿಯ ಮಡಿಯಲ್ಲಿದೆ. ಇದಲ್ಲದೆ ಇನ್ನೂ ಕೆಲವು ಶಾಸನಗಳು ಅನಂತರ ಕಾಲದವು ಈ ಶಾಸನಗಳಿರುವ ಮಡಿಗಳನ್ನು ಸ್ಥಳೀಯ ಜನರು ಅಂಗಡಿಗಳೆಂದು ಕರೆಯುತ್ತಾರೆ. ಇದರ ಮುಂದೆ ಆಳವಾದ ದೊಡ್ಡ ಕಣಿವೆ ಇದೆ. ಈ ಕಣಿವೆಯಲ್ಲಿ ಶಾತವಾಹನರ ಕಾಲದ ಹಾಗೂ ಅನಂತರ ಕಾಲದ ಜನವಾಸ್ತವ್ಯ ನೆಲೆ ಇದೆ. ಇಲ್ಲಿ ಶಿಲಾಯುಗ ಕಾಲದ ಮಣ್ಣಿನ ಪಾತ್ರೆಗಳ ಅವಶೇಷಗಳು ಹೇರಳವಾಗಿ ದೊರೆತಿವೆ.

ಈ ಶಾಸನಗಳನ್ನು ಕೆಮ್ಮಣ್ಣು ಮತ್ತು ಬಿಳಿ ಬಣ್ಣಗಳಲ್ಲಿ ಬರೆಯಲಾಗಿದೆ. ಸಾಮಾನ್ಯವಾಗಿ ಬೇರೆಡೆಗಳಲ್ಲಿ ಕಂಡುಬರುವಂತೆ ಅಕ್ಷರಗಳನ್ನು ಕೆತ್ತಿಲ್ಲ. ಈ ರೀತಿಯ ಒಂದು ಕ್ರಮ ಇದುವರೆಗೂ ತಿಳಿದಮಟ್ಟಿಗೆ ಅಪರೂಪವಾಗಿ ಶಾತವಾಹನರ ಕಾಲದಿಂದ ಕಾಣಿಸಿಕೊಳ್ಳುತ್ತದೆ. ಉದಾಹರಣೆಗಾಗಿ ಕುರುಗೋಡುನಲ್ಲಿರುವ ಶಾತವಾಹನರ ಕಾಲದ ಕೆಮ್ಮಣ್ಣಿನಲ್ಲಿ ಬರೆದ ಶಾಸನ (ಕ.ವಿ.ವಿ. ಸಂ.೧) ಬಾದಾಮಿ ಗುಡ್ಡಗಳಲ್ಲಿಯೂ ಆದಿ ಕದಂಬರ ಕಾಲದ ಇಂಥ ಶಾಸನ ಬರಹಗಳು ಅಲ್ಲಲ್ಲಿ ಇವೆ.

ಬಾದಾಮಿ ಚಲುಕ್ಯರ ಕಾಲದ ಇನ್ನೆರಡು ಕುತೂಹಲಕಾರಿ ಶಿಲ್ಪಕೃತಿಗಳು ಗಂಗಾವತಿಗೆ ಹತ್ತಿರದ ಕುಕನೂರ ಮತ್ತು ಇಟಗಿಯಲ್ಲಿವೆ. ಕುಕನೂರಿನಲ್ಲಿ ಶಾಸನಸಹಿತ ಸ್ತಂಭ ಹಾಗೂ ಇಟಗಿಯಲ್ಲಿ ಒಂದು ಅಲಂಕೃತ ಬಾಗಿಲು ತೋರಣವಿದೆ. (ನಾಗರಾಜರಾವ್ ಎಂ.ಎಸ್. ೧೯೭೮ : ೩೧)

ಒಟ್ಟಿನಲ್ಲಿ ಈ ಪ್ರದೇಶದಲ್ಲಿ ಬಾದಾಮಿ ಚಲುಕ್ಯರ ಕಾಲದಲ್ಲಿಯ ವಾಸ್ತುಶಿಲ್ಪದ ಮತ್ತು ಮೂರ್ತಿಶಿಲ್ಪ ಬೆಳವಣಿಗೆಯಲ್ಲಿ ಗಮನಾರ್ಹ ಅಂಶಗಳು ಇವೆ.

**ರಾಷ್ಟ್ರಕೂಟರು :**

ಕ್ರಿ.ಶ. ೭೫೩ರಲ್ಲಿ ಬಾದಾಮಿ ಚಲುಕ್ಯರ ಸಾರ್ವಭೌಮತ್ವವನ್ನು ಕೊನೆಗಾಣಿಸಿ ರಾಷ್ಟ್ರಕೂಟರು ಅಧಿಕಾರಕ್ಕೆ ಬಂದರು ಇವರು ಕ್ರಿ.ಶ. ೯೭೩ರ ವರೆಗೆ ಸು. ಎರಡು ಶತಮಾನಗಳ ಕಾಲ ಬೃಹತ್ ಸಾಮ್ರಾಜ್ಯವನ್ನು ಕಟ್ಟಿ ಆಳಿದರು. ರಾಷ್ಟ್ರಕೂಟರ ಸಾಮ್ರಾಜ್ಯ ಉತ್ತರದಲ್ಲಿ ನರ್ಮದಾ ನದಿಯಿಂದ ದಕ್ಷಿಣದಲ್ಲಿ ಕಾವೇರಿವರೆಗೂ ಪಶ್ಚಿಮದಲ್ಲಿ ಅರಬ್ಬಿ ಸಮುದ್ರ ಮತ್ತು ಮಾಳವದಿಂದ ಪೂರ್ವದಿಂದ ಆಂಧ್ರಪ್ರದೇಶದ ವಾರಂಗಲೆ ಮತ್ತು ಕಡಪ ಜಿಲ್ಲೆಗಳವರೆಗೂ ವಿಸ್ತರಿಸಿತ್ತು.

ರಾಷ್ಟ್ರಕೂಟರ ಶ್ರೇಷ್ಠ ಅರಸರಲ್ಲಿ ಒಬ್ಬನಾದ ಅಮೋಘವರ್ಷನೆ ನೃಪತುಂಗ ಆಡಳಿತದ ಅವಧಿಯಲ್ಲಿ ಧರ್ಮ ಮತ್ತು ಸತ್ಯದ ಪ್ರಗತಿಯ ದೃಷ್ಟಿಯಿಂದ ಕರ್ನಾಟಕ ಮತ್ತು ದಕ್ಷಿಣ ಭಾರತದ ಇತಿಹಾಸದಲ್ಲಿ ಮಹತ್ವಪೂರ್ಣ ಅಧ್ಯಾಯವಾಗಿದೆ. ಸ್ವತಃ ವಿದ್ವಾಂಸನಾಗಿದ್ದ ನೃಪತುಂಗನು ಕನ್ನಡ ಸಾಹಿತ್ಯದ ಪ್ರಥಮ ಗ್ರಂಥ ಕವಿರಾಜಮಾಗ ಗ್ರಂಥವನ್ನು ರಚಿಸಿದ್ದಾನೆ. ಶ್ರೀ ವಿಜಯ ಅಮೋಘವರ್ಷ ನೃಪತುಂಗನ ಆಸ್ಥಾನ ಕವಿಯಾಗಿದ್ದನೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಮೋಘವರ್ಷನು ಗಂಗಾವತಿ ಪ್ರದೇಶದ ಕೊಪ್ಪಳವನ್ನು ವಿದಿತ ಮಹಾತೊಪಣ ನಗರ ಎಂದು ಕರೆದಿದ್ದಾನೆ. ಇದರಿಂದ ಕೊಪಳವನ್ನೊಳಗೊಂಡ ಗಂಗಾವತಿ ಪ್ರದೇಶ ಅಮೋಘವರ್ಷನ ಆಧೀನದಲ್ಲಿದ್ದಿತೆಂದು ತಿಳಿಯುತ್ತದೆ.

ಗಂಗಾವತಿ ಪ್ರದೇಶದ ಭೋಗಾವತಿ (ಮಾನ್ವಿ ತಾ) ಮತ್ತು ಯೆರಡೋಣಿಗಳಲ್ಲಿ ಇವರ ಶಾಸನಗಳಿವೆ. ಭೋಗಾವತಿಯ ಶಾಸನವು ಎರಡನೆಯ ಕೃಷ್ಣನ ಕಾಲದ್ದಾಗಿದೆ. ಇವನ ಮಗ ೨ನೆಯ ಜಗತ್ತುಂಗನ ತಂದೆಯ ಅಧೀನನಾಗಿ ಎಡದೊರೆ ೨೦೦೦ ಪ್ರಾಂತವನ್ನು ಅಣುಜೀವಿತವಾಗಿ ಆಳಿ ದ ಬಗ್ಗೆ ಹೇಳುತ್ತದೆ. ಕೃಷ್ಣಾ - ತುಂಗಭದ್ರಾ ನದಿಗಳ ನಡುವಿನ ರಾಯಚೂರು ಜಿಲ್ಲೆಯ ಪ್ರದೇಶವೇ ಎಡದೊರೆ ೨೦೦೦ ಪ್ರಾಂತವಾಗಿದೆ. ಯೆರಡೋಣಿ ಶಾಸನವು ೩ನೆಯ ಇಂದ್ರನ ಕ್ರಿ.ಶ. ೯೨೭ - ೨೮ರ ಕಾಲದ್ದಾಗಿದ್ದು, ಆ ಶಾಸನದಲ್ಲಿ ಇಂದ್ರನನ್ನು ``ಹಿರಣ್ಯ ವರ್ಷ ಎಂದು ಕರೆಯಲಾಗಿದೆ. ಅಮೋಘವರ್ಷನ ಕಾಲದ ೧ ಶಾಸನವು ಕೊಪಳದಲ್ಲಿ ದೊರೆತಿವೆ (ಕ.ವಿ.ವಿ. ಸಂ.೧).

ಗಂಗಾವತಿ ಪ್ರದೇಶದಲ್ಲಿ ರಾಷ್ಟ್ರಕೂಟ ಕಾಲದ ಅನೇಕ ಕಲಾ ಸ್ಮಾರಕಗಳಿವೆ. ಅವುಗಳಲ್ಲಿ ಅವುಗಳಲ್ಲಿ ಮುಧೋಳದ ಸಿದ್ದೇಶ್ವರ ದೇವಾಲಯ ಕೊಣ್ಣೂರಿನ ಪರಮೇಶ್ವರನ ದೇವಾಲಯ, ಸವಡಿಯ ಬಹ್ಮೇಶ್ವರ, ನರೆಗಲ್ಲಿನ ನಾರಾಯಣ ದೇವಾಲಯ, ಸೂಡಿಯ ಮಲ್ಲಿಕಾರ್ಜುನ ಹಾಗೂ ಜೋಡೂ ಕಳಸದ ದೇವಾಲಯಗಳು ಮತ್ತು ಕುಕನೂರಿನ ನವಲಿಂಗೇಶ್ವರ ದೇವಾಲಯ ಪ್ರಮುಖವಾಗಿವೆ. ಮುಧೋಳ (ಸುಂದರ ಅ ೧೯೭೬ : ೧೨೮ - ೩೪) ನೀಲಗುಂದ (ಗದಗ ತಾ) (ಶಾಂತಕುಮಾರಿ ಎಸ್.ಎಲ್. ೧೯೭೪- ೮೫ : ೨೨೩ - ೨೨೪) ಗಳಲ್ಲಿ ರಾಷ್ಟ್ರಕೂಟರ ಕಾಲದ ಶಿಲ್ಪಗಳಿವೆ.

ರಾಷ್ಟ್ರಕೂಟ ಕಾಲದಲ್ಲಿ ಗಂಗಾವತಿ ಪ್ರದೇಶದ ದೇವಾಲಯದ ವಾಸ್ತುಶಿಲ್ಪದಲ್ಲಿ ಎರಡು ಬೆಳವಣಿಗೆಯನ್ನು ಕಾಣಬಹುದು. ಒಂದು ವಿಮಾನ ಮಾಧರಿಯ ದೇವಾಲಯ ವಿಶೇಷವಾಗಿ ಇರುವುದು ಎರಡನೆಯದು ಹೆಚ್ಚಿನ ಸಂಖ್ಯೆಯಲ್ಲಿ ತ್ರೈಪುರುಷ ದೇವಾಲಯಗಳ ನಿರ್ಮಾಣ ಬಾದಾಮಿ ಚಲುಕ್ಯರ ಕಾಲದಲ್ಲಿ ಬಾದಾಮಿ ಐಹೊಳೆ ಮತ್ತು ಪಟ್ಟದಕಲ್ ಭಾಗದಲ್ಲಿ ದೇವಾಲಯ ವಾಸ್ತುಶಿಲ್ಪದ ಮಾದರಿ ರಾಖಾನಗರಿ, ಕದಂಬ, ನಾಗರ, ಅರ್ಧ ಮಾಡಿನ ಮಂಟಪ ಮೊದಲಾದ ಶೈಲಿಯ ದೇವಾಲಯದ ಎಡದಿಗೆ ಇರುವ ಮನ್ಮಥ ತೀರ್ಥದ ಉತ್ತರ ಬದಿಗೆ ಇರುವ ದೇವಾಲಯ ಹೆಚ್ಚು ಉತ್ತರ ಬದಿಗೆ ಇರುವ ದೇವಾಲಯ ದೇವಾಲಯ ಹೆಚ್ಚು ಕಡಿಮೆ ಇದೇ ಕಾಲದ್ದು ಈ ಪ್ರರದೇಶದಲ್ಲಿ ಕ್ರಮೇಣ ವಿಮಾನ ಹಾಗೂ ಕದಂಬನಾಗರಿ ಮಾದರಿಯ ದೇವಾಲಯಗಳೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಇದಲ್ಲದೆ ದ್ವಿಕೂಟಾಚಲ ತ್ರಿಕೂಟಾಚಲ ಮಾದರಿಗಳ ದೇವಲಗಳೆ ಹೆಚ್ಚಿನ ಸಂಖ್ಯೆಯಲ್ಲಿವೆ. ಆದ್ದದರಿಂದ ಈ ಪ್ರದೇಶದಲ್ಲಿ ರಾಷ್ಟ್ರಕೂಟರ ಕಾಲದ ದೇವಾಲಯಗಳ ಬೆಳವಣಿಗೆಯನ್ನು ಗಮನಿಸಲಾಗಿದೆ.

**ಕಲ್ಯಾಣದ ಚಾಲುಕ್ಯರು :**

ಕರ್ನಾಟಕವನ್ನಾಳಿದ ಚಲುಕ್ಯ ರಾಜಮನೆತನಗಳಲ್ಲಿ ಕಲ್ಯಾಣ ಚಾಲುಕ್ಯರ ಮನೆತನವು ಒಂದಾಗಿದೆ. ಈ ಮನೆತನವು ಕ್ರಿ.ಶ. ೯೭೩ರಲ್ಲಿ ಸ್ಥಾಪಿತವಾಗಿ ಕ್ರಿ.ಶ. ೧೧೮೯ರಲ್ಲಿ ಕೊನೆಗೊಂಡಿತು. ಎರಡನೆಯ ತೈಲಪನು ಈ ವಂಶದ ಮೂಲ ಪುರುಷ ಚಾಲುಕ್ಯರು ಕರ್ನಾಟಕದಲ್ಲಿ ರಾಷ್ಟ್ರಕೂಟರ ನಂತರ ರಾಜ್ಯ ಸ್ಥಾಪಿಸಿ ಸುಮಾರು ೨೦೦ ವರ್ಷಗಳ ಕಾಲ ದಖನ್ನಿನ ಬಹುಭಾಗವನ್ನು ಆಳಿದರು. ಈ ವಂಶದ ಅರಸು ಸಾಹಿತ್ಯ ಧರ್ಮ ಮತ್ತು ಕಲೆ ವಾಸ್ತುಶಿಲ್ಪದ ಬೆಳವಣಿಗೆಗೆ ವಿಶೇಷ ಪ್ರೋತ್ಸಾಹ ನೀಡಿದರು.

ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ಗಂಗಾವತಿ ಪ್ರದೇಶವು ಸಂಪೂರ್ಣವಾಗಿ ಅವರ ಅಧೀನದಲ್ಲಿತ್ತು. ರಾಷ್ಟ್ರಕೂಟರನ್ನು ಸೋಲಿಸಿ ನಂತರ ತೈಲಪನು (ಕ್ರಿ.ಶ. ೯೭೩ - ೯೯೬) ಅವರ ಸಾಮಂತರನ್ನು ಸೋಲಿಸಿ ತನ್ನ ಸಾಮ್ರಾಜ್ಯವನ್ನು ತುಂಗಭಾದ್ರ ನದಿಯವರೆಗೂ ವಿಸ್ತರಿಸಿದನು. ಇವನು ನಿಧನಾನಂತರ ಸತ್ಯಾಶ್ರಯ ೫ನೆಯ ವಿಕ್ರಮಾದಿತ್ಯ ಅಧಿಕಾರಕ್ಕೆ ಬಂದನು. ಇವನ ಆಳ್ವಿಕೆಯ ಸಮಯದಲ್ಲಿ ಎಡದೊರೆ ೨೦೦೦ ಪ್ರಾಂತವನ್ನು ಆಳಿದ ಅವನ ತಮ್ಮ ಒಂದನೆಯ ಜಗದೇಕಮಲ್ಲ ಆಳಿದನೆಂದು ನವಲಿಯ ಶಾಸನ ಹೇಳುತ್ತದೆ (ಕ.ವಿ.ವಿ. ಸಂ.೨, ಶಾ.ಸಂ.೯೪, ಪು. ೧೮೧).

ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದ ಅನೇಕ ಶಾಸನಗಳು ಗಂಗಾವತಿ ಪ್ರದೇಶದಲ್ಲೆಲ್ಲಾ ದೊರೆಯುತ್ತದೆ. ಕಲ್ಲೂರಿನ ಶಾಸನವು (ಕ.ವಿ.ವಿ. ಸಂ.೨, ಶಾ.ಸಂ.೯೪, ಪು. ೧೮೦-೬೮). ವಿಕ್ರಮಾದಿತ್ಯನು

ದಿಗ್ವಿಜಯ ಕೈಗೊಂಡ ಸಮಯದಲ್ಲಿ ನರ್ಮದಾ ದಂಡೆಯ ಮೇಲೆ ಬೀಡು ಬಿಟ್ಟಿದ್ದಾಗ ಕಲ್ಲೂರನ್ನು ದಾನ ಮಾಡಿದ ಬಗ್ಗೆ ತಿಳಿಸುತ್ತದೆ. ವಿಕ್ರಮಾದಿತ್ಯನಿಗೆ ೧೨ ಜನ ರಾಣಿಯರಿದ್ದರು. ಅವರೆಲ್ಲಾ ಒಂದೊಂದು ಪ್ರಾಂತವನ್ನು ಆಳುತ್ತಿದ್ದು ಅವರಲ್ಲಿ ಒಬ್ಬಳಾದ ರಾಣಿ ಅಬ್ಬಲಾದೇವಿಲಯ ಕಂಡಿಕಲ್ ೪೦೦ ಪ್ರಾಂತದ ಲಿಂಗಸಗೂರು ಗ್ರಾಮದಿಂದ ಆಳುತ್ತಿದ್ದಳು. (ಎ.ಆರ್.ಆಯ್.ಇ. ೧೯೫೩ - ೫೪ ನಂ ಬಿ. ೨೪೧) ಇನ್ನೊಬ್ಬ ರಾಣಿ ತ್ರೈಲೋಕ್ಯ ಮಹಾದೇವಿಯು ನಿಟ್ಟೂರವಿ ೭೦ರ ಬಳಿಯ ಅಗ್ರಹಾರ ಮುಕ್ಕುಂದ ಸಿಂದನೂರ ತಾ ನಾಜಡನ್ನು ಆಳುತ್ತಿದ್ದಳು. (ಶರಣಬಸಪ್ಪ ಪಿ : ೧೯೯೦ : ೩೫)

ವಿಕ್ರಮಾದಿತ್ಯನ ನತಂರ ಬಂದ ಅರಸರು ದುರ್ಬಲರಾದ್ದರಿಂದ ಕಳಚುರ್ಯರು ದೇವಗಿರಿಯ ಸೇವುಣರು ದ್ವಾರಸಮುದ್ರದ ಹೊಯ್ಸಳರು ಉತ್ಕರ್ಷಗೊಂಡಿದ್ದರಿಂದ ಚಲುಕ್ಯ ಸಂತತಿ ಕಣ್ಮರೆಯಾಯಿತು.

**ಕಳಚೂರ್ಯರು :**

ಕಲ್ಯಾಣ ಚಲುಕ್ಯ ಮುಮ್ಮಡಿ ತೈಲಪನ ಆಳ್ವಿಕೆಯಲ್ಲಿ ಆದರೆ ಕ್ರಿ.ಶ. ೧೧೫೬ರಲ್ಲಿ ಕಳಚೂರ್ಯ ಬಿಜ್ಜಳನು ಪ್ರಬಲನಾಗಿ ಚಾಲುಕ್ಯ ಸಿಂಹಾಸನವನ್ನು ವಶಪಡಿಸಿಕೊಂಡನು. ಬಿಜ್ಜಳನು ಸಮರ್ಥ ಯೋಧ ಮತ್ತು ದಂಡಾನಾಯಕನಾದ್ದನು. ಇವನ ಆಳ್ವಿಕೆಯ ಕಾಲದಲ್ಲಿ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಘಟನೆಯಾಗಿದೆ. ಬಿಜ್ಜಳನ ಮಂತ್ರಿಯಾಗಿದ್ದ ಬಸವೇಶ್ವರರು ಸಾಮಾಜಿಕ, ಧಾರ್ಮಿಕ ಸಮತಾ ಕ್ರಾತಿಯನ್ನು ಈ ಅವಧಿಯಲ್ಲಿ ಕೈಗೊಂಡರು.

ಬಿಜ್ಜಳನ ನಂತರ ಅವನ ಮಕ್ಕಳಾದ ಸೋವಿದೇವ ಸಂಕಮಿ ಅವಹಮಲ್ಲ ಮತ್ತು ಸಿರಿಘಣ ಎಂಬುವರು ಕ್ರಮವಾಗಿ ಆಳಿದರು. ತಂದೆಯ ಆಳ್ವಿಕೆಯ ಅವಧಿಯಲ್ಲಿ ರಾಯಮ ಸೋಮದೇವನ ಗಂಗಾವತಿ ಪ್ರದೇಶದ ಕೊಪ್ಪಳ ಸೀಮೆಯ ಮಾದಿನೂರಿನಿಂದ ಆಡಳಿತ ನಡೆಸುತ್ತಿದ್ದನೆಂದು ಕುಕನೂರಿನ ಶಾಸನ (ದೇಸಾಯಿ ಪಿ.ಬಿ. ೧೯೫೬ : ೬೭) ವೊಂದು ತಿಳಿಸುತ್ತದೆ. (ಕ.ವಿ.ವಿ. ಸಂ ೨, ಶಾ.ಸಂ. ೪೧, ಪು.೨೦೯-೨೧೪)

ಕ್ರಿ.ಶ. ೧೧೮೪ರಲ್ಲಿ ತೈಲಪನ ಮಗ ೪ನೆಯ ಸೋಮೇಶ್ವರನು ತನ್ನ ತಂದೆಯ ಕಾಲದಲ್ಲಿ ಕೈಬಿಟ್ಟು ಹೋಗಿದ್ದ ಚಾಲುಕ್ಯ ಸಿಂಹಾಸನವನ್ನು ಪುನಃ ವಶಪಡಿಸಿಕೊಂಡನು, ಆದರೆ ಕೆಲದಿನಗಳಲ್ಲಿಯೇ ಚಾಲುಕ್ಯ ಪ್ರಭುತ್ವ ಕೊನೆಗೊಂಡಿತು.

**ದೇವಗಿರಿಯ ಸೇವುಣರು :**

ಚಾಲುಕ್ಯ ಮತ್ತು ಕಳಚೂರ್ಯರ ನಂತರ ದೇವಗಿರಿಯ ಸೇವುಣರು ಪ್ರಬಲರಾಗಿ ಅಧಿಕಾರಕ್ಕೆ ಬಂದರು. ೫ನೆಯ ಬಿಲ್ಲಣನು ಚಾಲುಕ್ಯ ಸೋಮೇಶ್ವರನಿಂದ ಸೇವುಣರ ಪರಮಾಧಿಕಾರವನ್ನು ಸ್ಥಾಪಿಸಿದರು. ಆಗ ಗಂಗಾವತಿ ಪ್ರದೇಶದ ಕೊಪ್ಪಳವನ್ನೊಳಗೊಂಡ ಬೆಳ್ವತ್ ಸೀಮೆ ಇವನ ವಶವಾಯಿತು. ಇವನ ಕಾಲದ ಕ್ರಿ.ಶ. ೧೧೯೧ರ ಶಾಸನ (ಎ.ಆರ್.ಐ.ಇ ೧೯೫೩ - ೫೪ ನಂ ೨೪೦) ವೊಂದು ಕರಿಡಿಕಲ್ (ಲಿಂಗಸೂರ ತಾ) ದೊರೆತಿದೆ. ಸೇವುಣರ ಪ್ರಸಿದ್ಧ ದೊರೆಯಾದ ಎರಡನೆಯ ಸಿಂಗಣ್ಣನ ಶಾಸನಗಳು ಕಾಲದ ಶಾಸನಗಳು ಗಂಗಾವತಿ ಪ್ರದೇಶದ ಸಂಕನೂರು (ಕ.ವಿ.ವಿ. ಸಂ.೨, ಶಾ.ಸಂ. ೨೮, ೧೮೩-

೬೪), ಕುಕನೂರ (ಕ.ವಿ.ವಿ. ಸಂ.೨, ಶಾ.ಸಂ. ೩೮, ಪು. ೧೯೭), ಕೊಪ್ಪಳ (ಕ.ವಿ.ವಿ. ಸಂ.೨, ಶಾ.ಸಂ. ೩೮, ಪು. ೪೭) ಮತ್ತು ಮುದಗಲ್ (ಎ.ಆರ್.ಆಯ್.ಇ ೧೯೫೩ : ೫೪ ನಂ. ೨೫೩)ಗಳಲ್ಲಿ ದೊರೆಯುತ್ತದೆ.

ಕ್ರಿ.ಶ. ೧೩೧೩ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ಸೇನಾಪತಿ ಮಲ್ಲಿಕಾಫರನು ದೇವಗಿರಿಗೆ ಮುತ್ತಿಗೆ ಹಾಕಿ ೩ನೆಯ ಸಿಂಘಣನನ್ನು ಸೋಲಿಸಿದನು. ೧೩೧೮ ವೇಳೆಗೆ ಯಾದವ ಪ್ರಭುತ್ವ ಕೊನೆಗೊಂಡಿತು.

**ನೊಳಂಬ ಪಲ್ಲವರ ಆಳ್ವಿಕೆ :**

ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಅವರ ಸಾಮಂತರಾದ ನಳಂಬ ಪಲ್ಲವರು ಗಂಗಾವತಿ ಪ್ರದೇಶವನ್ನು ಆಳಿದರೆಂಬ ಸಂಗತಿಯನ್ನು ದೇವಘಾಟ ವಿಪು ಮತ್ತು ಬಳ್ಳಾರಿ ತಾಲೂಕಿನ ಕಲ್ಬಂಬಿ ಮತ್ತು ಹಳೆ ನೆಲ್ಲುಡಿ ಗ್ರಾಮಗಳಲ್ಲಿಯ ಶಿಲಾಶಾಸನಗಳಿಂದ ತಿಳಿದುಬರುತ್ತದೆ. (ಕ.ವಿ.ವಿ. ಸಂ.೨, ಶಾ.ಸಂ. ೩೮, ಪು. ೧೭) ಗಂಗಾ ರಾಷ್ಟ್ರಕೂಟರ ಕಾಲದಲ್ಲಿ ಐತಿ. ಹೆಂಚೇರುವಿನಿಂದ ಆಳುತ್ತಿದ್ದ ನೊಳಂಬ ಪಲ್ಲವರು ಅದರ ದಾಳಿಯಿಂದಾಗಿ ಉತ್ತರಕ್ಕೆ ಬಂದು ಕಂಪಲಿ (ಕಂಪ್ಲಿ)ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸಾರ್ವಭೌಮತ್ವದಡಿಯಲ್ಲಿ ಆಡಳಿತ ನಡೆಸುತ್ತಾರೆ. ಈ ಮನೆತನದ ಹಂಸಜಗದೇಕಮಲ್ಲ ನೊಳಂಬ ಪೆರ್ಮಾನಡಿ ಉದಯಾದಿತ್ಯನು (ಕ್ರಿ.ಶ. ೧೦೭೧ - ೧೦೪೪) ಕಂಪಲಿಯ ಜೊತೆಗೆ ವಿಪು ನಾರಾಯಣವನ್ನು (ಗಂಗಾವತಿ ಬಳಿ ತುಂಗಾಭದ್ರಾ ನದಿ ತೀರದಲ್ಲಿರುವ ಹಿಂದಿ ವಿಪು ಎಂಬ ಹಾಳು ಗ್ರಾಮ) ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಗಂಗಾವತಿ ಪ್ರದೇಶವನ್ನು ಆಳುತ್ತಾನೆ. ವಿಪುದ ಶಿವ ದೇವಾಲಯ ಬನಶಂಕರಿ ದೇವಾಲಯ ದೇವಘಾಟದ ಸೋಮೇಶ್ವರ ಗಜಾನನ ಹಾಗೂ ಇತರ ದೇವಾಲಯಗಳು ವಿರುಪಾಪುರದ ಆಂಜನೇಯ ಮತ್ತು ರಾಮಲಿಂಗೇಶ್ವರ ದೇವಾಲಯಗಳು ನೊಳಂಬ ಪಲ್ಲವರ ನಿರ್ಮಾಣಗಳಾಗಿವೆ. ಇವೆಲ್ಲವು ಅವರ ಸಾರ್ವಭೌಮರಾದ ಕಲ್ಯಾಣ ಚಾಲುಕ್ಯರ ವಾಸ್ತುಶೈಲಿಯಲ್ಲಿದೆ. ವಿಪುದ ಶಿವ ದೇವಾಲಯ ರಾಮಲಿಂಗೇಶ್ವರ ದೇವಾಲಯ ವಾಸ್ತುಶಿಲ್ಪ ವಿಶೇಷತೆಯಿಂದ ಗಮನ ಸೆಳೆಯುತ್ತದೆ. ಗರ್ಭಗೃಹ ಮಾತ್ರ ಉಳಿದಿರುವ ರಾಮಲಿಂಗೇಶ್ವರ ದೇವಾಲಯ ಮೂಲತಃ ತ್ರಿಕೂಟ ಶೈಲಿಯ ದೇವಾಲಯವಾಗಿತ್ತೆಂಬುದು ತಿಳಿದುಬರುತ್ತದೆ. ವಿಪು ಮತ್ತು ದೇವಘಾಟದ ಶಿಲ ದೇವಾಲಯಗಳಲ್ಲಿ ಕ್ರಿ.ಶ. ೧೦೫೯ ಕಾಲದ ಇದರ ಎರಡು ಶಿಲಾಶಾಸಗಳಿವೆ.(ಕ.ವಿ.ವಿ. ಸಂ.೨, ಶಾ.ಸಂ. ೩೮, ಪು. )

ಕಲ್ಯಾಣ ಚಾಲುಕ್ಯರ ಪತನನಂತರ ಕಳಚೂರ್ಯ ಸೇವುಣ ಮತ್ತು ಹೊಯ್ಸಳರ ಅಧೀನಕ್ಕೆ ಗಂಗವತಿ ಪ್ರದೇಶ ಸೇರುತ್ತದೆ. ಹೊಯ್ಸಳ ದೊರೆ ವಿಷ್ಣುವರ್ಧನ ಬಳ್ಳಾರಿಯನ್ನು ಗೆದ್ದುಕಂಡು ನಂತರ ಹಂಪಿ, ಆನೆಗೊಂದಿ ಮೂಲಕ ಕುಮ್ಮಟದುರ್ಗವನ್ನು (ಮುಕ್ಕುಂಪಿ ಹತ್ತಿರ ಬೆಟ್ಟದ ಮೇಲೆ ಇದೆ) ತನ್ನ ಅಧೀನಕ್ಕೆ ತೆಗೆದುಕೊಂಡನು. ಆನೆಗೊಂದಿಯಲ್ಲಿ ಹೊಯ್ಸಳರು ಒಂದು ದೇವಾಲಯವನ್ನು ನಿರ್ಮಿಸಿದ್ದರೆಂದು ತೋರುತ್ತದೆ. ಆ ದೇವಾಲಯದ ಕಂಬಗಳನ್ನು ಸದ್ಯ ಆನೆಗೊಂದಿಯ ಹುಚ್ಚಪ್ಪಯ್ಯನ ಮಠ, ರಂಗನಾಥ ದೇವಾಲಯಗಳಲ್ಲಿ ದ್ವಾರಬಂಧವನ್ನು ಗಜಾನನ ದೇವಾಲಯದಲ್ಲಿ ಕಾಣಬಹುದು. ಹಾಗೆ ಹೊಯ್ಸಳರ ಕಾಲದ ಗಜಾನನ, ಉಮಾಮಹೇಶ್ವರ ಶಿಲ್ಪಗಳು ಕೂಡ ಇಲ್ಲಿವೆ.

**ವಿಜಯನಗರ ಪೂರ್ವ ಕಾಲ :**

ವಿಜಯನಗರ ಪೂರ್ವದಲ್ಲಿ ದಕ್ಷಿಣ ಭಾರತದಲ್ಲಿ ೪ ಹಿಂದು ರಾಜ್ಯಗಳು ಅಸ್ತಿತ್ವದಲ್ಲಿದ್ದವು. ದೆಹಲಿಯಲ್ಲಿ ಸುಲ್ತಾನ ರಾಜ್ಯ ಸ್ಥಾಪನೆಯಾದ (ಕ್ರಿ.ಶ. ೧೨೦೬) ನಂತರ ಖಿಲ್ಜಿಮನೆತನದ ಅಲ್ಲಾವುದ್ದೀನ್ ಖಿಲ್ಜಿ ದಕ್ಷಿಣದೆಡೆಗೆ ಗಮನಹರಿಸಿದನು. ಆತನ ದಂಡಾಧಿಪತಿ ಮಲ್ಲಿಕಾಫರನ ದಾಳಿಗೆ ದಕ್ಷಿಣದ ಎಲ್ಲಾ ರಾಜ್ಯಗಳ ನಲುಗಿದರೂ ಗಂಗಾವತಿ ಪ್ರದೇಶವನ್ನೊಳಗೊಂಡಿದ್ದ ಕುಮ್ಮಟ ರಾಜ್ಯ ದಾಳಿಯನ್ನು ಎದುರಿಸಿ ಉಳಿಯುತ್ತದೆ. ತಮ್ಮ ಶೌರ್ಯ ಸಾಹಸಗಳಿಗೆ ಜನಾನುರಾಗಿರುವ ಆ ರಾಜ್ಯದ ಕಂಪಿಲರಾಯ ಮತ್ತು ಅವನ ಮಗ ಕುಮಾರರಾಮನು ಕ್ರಿ.ಶ. ೧೩೨೭ರಲ್ಲಿ ನಡೆದ ಮಹ್ಮದ್ ಬಿನ್ ತಘಲಖಿನ್ ದಾಳಿಯಲ್ಲಿ ಹೋರಾಡುತ್ತಾ ವೀರಮರಣ ಹೊಂದಿದ್ದರು. ಈ ಪ್ರದೇಶ ದೆಹಲಿ ಸುಲ್ತಾನನ ವಶವಾಯಿತು.

**ವಿಜಯನಗರ ವಿಜಯನಗರೋತ್ತರ ಕಾಲ :**

ಸುಲ್ತಾನರ ದಬ್ಬಾಳಿಕೆಗೆ ಪ್ರತಿಭಟನಾತ್ಮಕವಾಗಿ ಹೊಯ್ಸಳ ವಂಶಜರು ಕ್ರಿ.ಶ. ೧೩೪೬ರಲ್ಲಿ ಹಂಪಿಯಲ್ಲಿ ಪಟ್ಟಾಭಿಷಿಕ್ತರಾಗಿ ಪ್ರಬಲರಾಗಲು ಯತ್ನಿಸಿದರು. ಆದರೆ ಈ ವಿದ್ಯಾರಣ್ಯರ ಪ್ರಯತ್ನದಿಂದ ಸಫಲವಾಗಲಿಲ್ಲ. ಮುದೆ ಕಾಶಿವಿಲಾಸ ಕ್ರಿಯಾಶಕ್ತಿ ದೇವರ ಪ್ರೇರಣೆಯೊಂದಿಗೆ ಹರಿಹರ ಬುಕ್ಕರು ವಿಜಯನಗರ ಸ್ಥಾಪಿಸಿದರು. ಆನೆಗೊಂದಿ ಮೊದಲ ರಾಜಧಾನಿಯಾಗಿತ್ತು. ಸಂಗಮ ಮನೆತನದ ಅವರ ಕಾಲದಲ್ಲಿ ಅದರಲ್ಲೂ ವಿಶೇಷವಾಗಿ ಪ್ರೌಢ ದೇವರಾಯನ ಕಾಲದಲ್ಲಿ ಗಂಗಾವತಿ ಪ್ರದೇಶದಲ್ಲಿ ಅನೇಕ ನಿರ್ಮಾಣ ಚಟುವಟಿಕೆಗಳು ನಡೆದವು. ಹಿರೇಜಂತಗಲ್ ಪಂಪಾಪತಿ ದೇವಾಲಯ ಈ ಕಾಲದಲ್ಲಿ ಪ್ರಮುಖ ನಿರ್ಮಾಣ ಹಾಗೇ ಚಿಕ್ಕಬೆಣಕಲ್ಲಿನಲ್ಲಿ ಬೃಹತ್ ಕೆರೆಗಳನ್ನು (ರಾಯರ ಕೆರೆ) ನಿರ್ಮಿಸಿದ್ದಾನೆ. ಚಿಕ್ಕಬೆಣಕಲ್‌ನಲ್ಲಿ ಇವನ ಒಂದು ಶಿಲಾಶಾಸನವಿದೆ. ಇವನ ಕಾಲದಲ್ಲಿಯೆ ಕನಕಗಿರಿಯಲ್ಲಿ ಗುಜ್ಜಲವಂಶದ ಪರಸಪ್ಪ ನಾಯಕ ಪಾಳೆಯಪಟ್ಟನ್ನು ಪ್ರಾರಂಭಿಸಿದರು. ಕ್ರಿ.ಶ. ೧೩೩೬ರಲ್ಲಿ ಹರಿಹರನ ಕಾಲದಲ್ಲಿ ಬೈಚದಂಡ ನಾಯಕನ ಮಗ ಇರುಗಡ ದಂಡ ನಾಯಕನು ಆನೆಗೊಂದಿಯಲ್ಲಿ ಬಸದಿಯಂದನ್ನು ನಿರ್ಮಿಸಿದ್ದಾನೆ.

ವಿಜಯನಗರ ಸಾಮ್ರಾಜ್ಯಕ್ಕೆ ಉತ್ತರ ದಿಕ್ಕಿನ ಮುಖ್ಯ ಪ್ರವೇಶ ರಹದಾರಿ ಗಂಗಾವತಿ ತಾಲೂಕಿನಲ್ಲಿತ್ತೆಂಬುದು ಗಮನಾರ್ಹ. ಸಂಗಾಪುರ - ಮಲ್ಲಾಪುರ ನಡುವೆ ಉತ್ತರ ದಿಕ್ಕಿನ ಪ್ರವೇಶದ್ವಾರ (ಶಿಥಿಲವಾಗಿದೆ) ಈಚೆಗೆ ಬೆಳಕಿಗೆ ಬಂದಿದೆ. ಗಂಗಾವತಿ ತಾಲೂಕಿಗೆ ಸಂಬಂಧಿಸಿದಂತೆ ವಿಜಯನಗರ ವಿಜಯನಗರೋತ್ತರ ಕಾಲದ ಚರಿತ್ರೆ ಎಂದರೆ ಅದು ಪಾಳೆಯಪಟ್ಟಿನ ಚರಿತ್ರೆಯೇ ಎನ್ನಬಹುದು.

**ಕನಕಗಿರಿ ಪಾಳೆಯಪಟ್ಟು ಕ್ರಿ.ಶ. ೧೪೩೬ ರಿಂದ ೧೯೩೩ :**

ಕ್ರಿ.ಶ. ೧೪೩೬ರಲ್ಲಿ ಗುಜ್ಜಲವಂಶದ ಪರಸಪ್ಪ ನಾಯಕನಿಂದ ಕನಕಗಿರಿಯಲ್ಲಿ ವಿಜಯನಗರ ಅಧೀನ ಪಾಳೆಯಪಟ್ಟು ಪ್ರಾರಂಭವಾಯ್ತು. ಈ ವಂಶದ ಒಟ್ಟು ೧೨ ಜನ ನಾಯಕರು ಆಡಳಿತ ನಡೆಸಿದ್ದು ಅವರಲ್ಲಿ ಮೊದಲಿನ ೯ ಜನ ಕನಕಗಿರಿಯಿಂದಲೂ (೧೮೩೩ರವರೆಗೆ) ಉಳಿದ ೩ ಜನ ಪಕ್ಕದ ಹುಲಿಹೈದರದಿಂದಲೂ (ಕ್ರಿ.ಶ. ೧೮೩೩ ರಿಂದ ೧೯೪೮) ಈ ಪ್ರದೇಶದಲ್ಲಿ ಆಡಳಿತ ನಡೆಸಿದರು. ಇವರಲ್ಲಿ ಸಾಬ ಉಡಚನಾಯಕ ಇಮ್ಮಡಿ ಉಡಚನಾಯರ್ ಹಿರೇರಂಗಪ್ಪನಾಯಕ ಪ್ರಮುಖ ಪಾಳೆಯಗಾರರಾಗಿದ್ದರು. ನಾಯಕರ ರಾಣಿಯರು ಆಡಳಿತ ಮತ್ತು ಸಾಮಾಜಿಕ, ಧಾರ್ಮಿಕ ವಿಷಗಳಲ್ಲಿ ಮಹತ್ವದ ಪಾತ್ರವಹಿಸಿರುವುದು

ಗಮನಾರ್ಹವಾಗಿದೆ. ನಾಯಕರು ಕಲಾಪ್ರೇಮಿಗಳಾಗಿದ್ದು ಕನಕಗಿರಿಯಲ್ಲಿ ಅನೇಕ ಕಲಾಸ್ಮಾರಕಗಳನ್ನು ನಿರ್ಮಿಸಿದರು. ಅವುಗಳಲ್ಲಿ ಲಕ್ಷ್ಮೀನರಸಿಂಹ ದೇವಾಲಯ, ವೆಂಟಕಪತಿ ಭಾವಿ, ವೆಂಕಟಪತಿ ಪ್ರತಿಮಾಗೃಹ (ಅಪೂರ್ಣ) ನಿರ್ಮಾಮಗಳಾಗಿವೆ.

ಕನಕಗಿರಿ ವಿಜಯನಗರಕ್ಕೆ ಬಹಮನಿ ಮತ್ತು ಆದಿಲ್‌ಶಾಹಿ ರಾಜ್ಯಗಳ ದಾಳಿಯ "ತಡೆ ರಾಜ್ಯ"ವಾಗಿ ಕಾರ್ಯನಿರ್ವಹಿಸಬೇಕಾದ್ದರಿಂದ ಸೈನಿಕವಾಗಿ ಸಮರ್ಥವಾಗಿತ್ತು. ಒಮ್ಮೆ ಬಿಜಾಪುರದ ಸೈನ್ಯ ಕನಕಗಿರಿಯ ಮೇಲೆ ದಾಳಿ ಮಾಡಿದಾಗ ಅದನ್ನು ಯಶಸ್ವಿಯಾಗಿ ಇಮ್ಮಡಿ ಉಡಚನಾಯಕ ಸೋಲಿನ ಹಿಮ್ಮೆಟ್ಟಿಸಿದನು. ೯ನೆಯ ದೊರೆ ಹಿರೇನಾಯಕ ಉದ್ದಟನಾಗಿದದ್ದರಿಂದ ಹೈದ್ರಾಬಾದ್ ನಿಜಾಮಂ ಅವನನ್ನು ಸೋಲಿಸಿ ರಾಜ್ಯವನ್ನು ಕೈವಶ ಮಾಡಿಕೊಂಡನು.

**ಹುಲಿಹೈದರ್ ಸಂಸ್ಥಾನ (ಕ್ರಿ.ಶ. ೧೮೩೩ ೧೯೪೮) :**

ಕನಕಗಿರಿಯಿಂದ ಸುಮಾರು ೧೦ ಕಿ.ಮೀ. ದೂರದಲ್ಲಿ ಹುಲಿಹೈದರ್ ಗ್ರಾಮವಿದೆ. ಇಲ್ಲಿ ಕನಕಗಿರಿಯ ಗುಜ್ಜಲವಂಶದ ನಾಯಕ ಮನೆತನದವರು ಆಳ್ವಿಕೆಯನ್ನು ನಡೆಸಿದ್ದು ಇದಕ್ಕೆ ಹುಲಿಹೈದರ್ ಸಂಸ್ಥಾನವೆಂದು ಹೆಸರು. ಕನಗಿರಿ ಪಾಳೆಯಪಟ್ಟನ್ನು ಹೈದರಬಾದ್ ನಿಜಾಮನು ಹಿರೇನಾಯಕನಿಂದ ವಶಪಡಿಸಿಕಂಡು ನಂತರ ಅವನ ೨ನೆಯ ಮಗ ರಂಗನಾಥ ನಾಯಕ (ಗಡ್ಡದ ದೊರೆ) ಬಂಡೆಳಲು ಅವನಿಗೆ ನಿಜಾಮನು ಕನಕಗಿರಿಯನ್ನು ಹೊರತು ಪಡಿಸಿ ೧೬ ಹಳ್ಳಿಗಳನ್ನು ನೀಡಿದನು. ರಂಗನಾಥಪ್ಪ ನಾಯಕನು ಹುಲಿಹೈದರ್ ಕೇಂದ್ರವಾಗಿರಿಸಿಕೊಂಡು ಆಡಳಿತವನ್ನು ಪ್ರಾರಂಭಿಸಿದನು. ಕನಕಗಿಕಿ ಗ್ರಾಮ ನಿಜಾಮನು ಸ್ವಾದೀನದಲ್ಲಿದ್ದರೂ ಶ್ರೀ ಕನಕಾಚಲಪತಿ ದೇವರ ಜಾತ್ರೆ ನಡೆಸುವ ಅಧಿಕಾರವನ್ನು ನಾಯಕರಿಗೆ ಬಿಡಲಾಗಿದ್ದಿತು. ಇವನ ಕಾಲದಲ್ಲಿ ಟಿಪ್ಪುಸುಲ್ತಾನ ಮತ್ತು ಹರಪನಹಳ್ಳಿ ದೊರೆ ಕನಕಗಿರಿಯ ಮೇ ದಾಳಿ ಮಾಡಿದ ಈತನ ನಂತರ ಹಿರಿಯ ಮಗ ರಂಗಪ್ಪನಾಯಕ ಅಧಿಕಾರ ವಹಿಸಿಕೊಂಡನು. ರಂಗಪ್ಪನಾಯಕನಿಗೆ ಗಂಡುಮಕ್ಕಳಿರಲಿಲ್ಲ. ಈತನು ಮೃತನಾದ ನಂತರ ಹಿರಿಯ ರಾಣಿ ವೆಂಕಟಮ್ಮ ಮೈದುನ ಸೋಮಸಾಗರದ ಕನಕಪ್ಪನಾಯಕನ ಮಗ ಉಡಸಿನಾಯಕನ್ನು ದತ್ತು ತೆಗೆದುಕೊಂಡಳು. ಈತನ ಕಾಲದಲ್ಲಿ ಕನಕಾಚಲ ಪತಿ ದೇವಾಲಯಕ್ಕೆ ಅರಸನ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಲಾಯ್ತು. ಉಡಸಿನಾಯಕನ ನಂತರ ಅವನ ಮಗ ರಾಜ ರಂಗಪ್ಪನಾಯಕ ಅಧಿಕಾರ ವಹಿಸಿಕೊಂಡರೂ ಚಿಕ್ಕ ವಯಸ್ಸಿನಲ್ಲೇ ನಿಧನನಾದನು. ರಾಣಿ ಗೌರಮ್ಮ ಮೈದುನನ ಮಗ ರಂಗಪ್ಪ ನಾಯಕನನ್ನು ದತ್ತು ತೆಗೆದುಕೊಂಡಳು. (ಸದ್ಯ ಹುಲಿಹೈದರ್‌ದಲ್ಲಿ ಇದ್ದಾರೆ) ಆದರೆ ರಂಗಪ್ಪನಾಯಕ ಅಲ್ಪಪ್ರಾಯದವನಾಗಿರುವುದರಿಂದ ಆಡಳಿತ ಸಂಚಾರಿ ನಡೆಯುತ್ತಿಲವೆಂದು ನೆಪವೊಡ್ಡಿ ನಿಜಾಮ ಸಂಸ್ಥಾನವನ್ನು ಸ್ವಾದೀನ ಪಡಿಸಿಕೊಂಡನು. ರಾಣಿ ಗೌರಮ್ಮ ಹಾಗೂ ದತ್ತುಪುತ್ರ ರಾಜರಂಗಪ್ಪನಾಯಕನನ್ನು ವರ್ಷಾಸ ಗೊತ್ತುಪಡಿಸಿ ಹೈದರಾಬಾದಿನಲ್ಲಿ ಇರಿಸಲಾಯ್ತು (ರಾಣಿ ಗೌರಮ್ಮ ೧೯೫೨ರಲ್ಲಿ ಅಲ್ಲಿಯೇ ನಿಧನರಾದರು) ನಂತರ ರಾಜಾರಂಗಪ್ಪ ನಾಯಕನಿಗೆ ಅಧಿಕಾರ ಬಿಟ್ಟುಕೊಡಲಾಯಿತಾದರೂ ೧೯೪೮ರ ವಿಮೋಚನೆಯೊಂದಿಗೆ ಸಂಸ್ಥಾನ ಭಾರತ ಸರಕಾರದಲ್ಲಿ ವಿಲೀನವಾಯಿತು.

# ಅಧ್ಯಾಯ ನಾಲ್ಕು

## ಆಡಳಿತ ವ್ಯವಸ್ಥೆ

ಪ್ರಾಚೀನ ಕರ್ನಾಟಕದಲ್ಲಿ ಆಡಳಿತ ವ್ಯವಸ್ಥೆಯನ್ನು ರಾಜ್ಯ ಆಡಳಿತ, ನಾಡು ಮಂಡಲ, ನಗರ, ಪಟ್ಟಣ, ಗ್ರಾಮ, ಭಾಗಗಳಾಗಿ ವಿಂಗಡಿಸಲಾಗಿದೆ. ಇವು ನಮ್ಮ ಸೌಕರ್ಯಕ್ಕಾಗಿ ಮಾಡಿಕೊಂಡಿರುವ ವ್ಯವಸ್ಥೆ. ಇವು ಆಡಳಿತದ ಪ್ರತ್ಯೇಕ ಘಟಕಗಳಾಗಿವೆ. ಗ್ರಾಮ ಆಡಳಿತ ಕೊನೆಯ ಘಟಕವಾಗಿದೆ. ಗ್ರಾಮಗಳಲ್ಲಿ ಗ್ರಾಮ ಪಂಚಾಯಿತಿಗಳಿದ್ದು ಅಲ್ಲಿನ ಮುಖಂಡ ಗೌಡನಾಗಿರುತ್ತಾನೆ. ಗ್ರಾಮಗಳಲ್ಲಿ ಗೌಡನ ನೇತೃತ್ವದಲ್ಲಿ ಆಡಳಿತವನ್ನು ನಿರ್ವಹಿಸಲ್ಪಡುತ್ತದೆ.

**ರಾಜ್ಯಾಡಳಿತ :**

ರಾಜ್ಯಾಡಳಿತದಲ್ಲಿ ರಾಜನೇ ಪ್ರಮುಖನು. ರಾಜ್ಯದ ರಕ್ಷಣೆಯೇ ಅವನ ಹೊಣೆಯಾಗಿತ್ತು. ಉನ್ನತ ಜವಾಬ್ದಾರಿ ಹೊತ್ತ ರಾಜನಿಗೆ ಪ್ರಜೆಗಳ ಕ್ಷೇಮವೇ ಅವನ ಆದ್ಯ ಕರ್ತವ್ಯ. ಇಂತಹ ಸಾರ್ವಜನಿಕ ಕರ್ತವ್ಯ ಹೊತ್ತ ರಾಜ ತನ್ನ ನೆರವಿಗಾಗಿ ಒಂದು ಮಂತ್ರಿ ಪರಿಷತ್ತನ್ನು ರಚಿಸಿಕೊಂಡಿರುತ್ತಾನೆ. ವಿವಿಧ ಅಧಿಕಾರಿಗಳನ್ನು ನೇಮಿಸಿಕೊಂಡಿರುತ್ತಾನೆ. ಸಾಮ್ರಾಜ್ಯವನ್ನು ಪ್ರಾಂಥ್ಯ, ರಾಷ್ಟ್ರ, ದೇಶ, ಮಂಡಲಗಳಾಗಿ ವಿಭಾಗಿಸುತ್ತಾರೆ. ಪ್ರಾಂಥ್ಯದ ಒಡೆಯನಿಗೆ 'ಮಂಡಲಾಧಿಪತಿ' ಎಂದು ಕರೆಯಲಾಗಿದೆ. ಇನ್ನು ಮಂಡಲದ ಕೆಳಗಿನ ವಿಭಾಗವನ್ನು ನಾಡು ಎಂದು ಗುರುತಿಸಲಾಗಿದೆ. ನಾಡುಗಳನ್ನು ನಾಡುಗಾವುಡ ಅಥವಾ ನಾಡಪೆರ್ಗಡೆ ಆಳುತ್ತಿದ್ದನು. ಗ್ರಾಮಗಳಲ್ಲಿ ಗ್ರಾಮಸಭೆಗಳು ಅಗ್ರಹಾರಗಳಲ್ಲಿ ಮಹಾಜನರು ಸಭೆ ಪಟ್ಟಣಗಳಲ್ಲಿ ವರ್ತಕರ ಸಭೆ ನಡೆಯುತ್ತದೆ. ವಿಭಾಗದ ಒಡೆಯ ಪಟ್ಟಣ ಸ್ವಾಮಿ ಆಗಿದ್ದನು.

ರಾಜ :

ಪ್ರಾಚೀನ ಕರ್ನಾಟಕದ ರಾಜರು ತಾವು ಮೂಲತಃ ದೈವಿಪುರುಷನಿಂದ ಇಳಿದು ಬಂದರೆಂದು ಹೇಳಿಕೊಳ್ಳಲು ಹೆಮ್ಮೆ ಪಡುತ್ತಿದ್ದರು. ರಾಜರು ದೇವರ ಅವತಾರ ಎಂಬ ಭಾವನೆಯೂ ಜನರಲ್ಲಿ ಬೆಳೆಯಲು ಇದು ಕಾರಣವಿರಬಹುದು. ಕದಂಬ ವಂಶವು ತನ್ನ ಮೂಲಪುರುಷ ಈಶ್ವರನೆಂದು ಭಾವಿಸುತ್ತದೆ. ರಾಜನ ಪದವಿಯು ವಂಶಾನುಗತವಾಗಿ ತಂದೆಯಿಂದ ಸಾಮಾನ್ಯವಾಗಿ ಹಿರಿಯ ಮಗನಿಗೆ ಹರಿದು ಬರುತ್ತಿತ್ತು. ಉದಾ : ರಾಷ್ಟ್ರಕೂಟ ದೊರೆ ೩ನೆಯ ಗೋವಿಂದನು ಸತ್ತ ನಂತರ ಅವನ ಹಿರಿಯ ಮಗ ರಾಜಕುಮಾರನು ಅಪ್ರಾಪ್ತ ವಯಸ್ಸಿನವನಾಗಿದ್ದರಿಂದ ರಾಜನ ಹತ್ತಿರದ ಬಂಧುವೊಬ್ಬನು ರಾಜಕುಮಾರನ ಪರವಾಗಿ ಆಳ್ವಿಕೆ ಮಾಡುತ್ತಿದ್ದನು. ಆನೆಗೊಂದಿ ಶಾಸನವೊಂದರಲ್ಲಿ ಹರಿಹರನ ಆಳ್ವಿಕೆಯಲ್ಲಿ ಅವನ ಮಗ ಕಂಪಭೂಪಾಲನು ತುಂಗಭದ್ರಾ ತೀರದಲ್ಲಿ ಸೋಪಾನ ಮಾಡಿಸಿದ ಎಂದು ಉಲ್ಲೇಖಿಸಿದೆ.[೧] (೧೦೬೯) ಆನೆಗೊಂದಿ ಶಾಸನವೊಂದರಲ್ಲಿ ಕಲ್ಯಾಣ ಚಾಲುಕ್ಯರ ದೊರೆ ತ್ರೈಲೋಕ್ಯಮಲ್ಲನು ಜೈನಶಾಸನಕ್ಕೆ ದಾನ ನೀಡಿ ಜಯ ಘೋಷಿಸಿದ ಎಂದು ಉಲ್ಲೇಖಿಸಿದೆ.[೨] ಆನೆಗೊಂದಿ ಶಾಸನವೊಂದರಲ್ಲಿ ಸದಾಶಿವರಾಯನು ಆನೆಗೊಂದಿಯ ಅಂಬಿಗರಿಗೆ ದಾನ ನೀಡಿದ ಉಲ್ಲೇಖಿಸಿದೆ.[೩] ಆನೆಗೊಂದಿ ಶಾಸನವೊಂದರಲ್ಲಿ ತಿರುಮಲ ರಾಜನು ಅಂಬಿಗರಿಗೆ ರಾಮಾಪುರದ ಒಂದು ಖಂಡುಗ ಗದ್ದೆಯನ್ನು ನೀಡಿದ ಎಂದು ಉಲ್ಲೇಖಿಸಿದೆ.[೪] ಆನೆಗೊಂದಿಯ ಶಾಸನವೊಂದರಲ್ಲಿ ತಿರುಮಲ ರಾಜನು ಜಂಗಮಯ್ಯ ಮಠಕ್ಕೆ ೨೦೦ ಹೊನ್ನಗಳನ್ನು ಹೊಲ ಮತ್ತು ಅರವಟ್ಟಿಗೆಯನ್ನು ನೀಡಿದ ಎಂದು ಉಲ್ಲೇಖಿಸಿದೆ.[೫] ಚಿಕ್ಕರಾಮಾಪುರ ಶಾಸನವೊಂದರಲ್ಲಿ ನರಸನಾಯಕನು ಕಪಿಲೇಶ್ವರ ದೇವರಿಗೆ ೧೫ ಕೊಳಗ ಗದ್ದೆ ಮಾನ್ಯಮಾಡಿದ ಉಲ್ಲೇಖಿಸಿದೆ.[೬] ಕನಕಗಿರಿ ಶಾಸನವೊಂದರಲ್ಲಿ ಪ್ರಭುದೇವರಾಯ ಕನಕಗಿರಿ ನಾಥನಿಗೆ ಕನಕಗಿರಿ ಪೇಟೆ ದಾನ ನೀಡಿದ ಉಲ್ಲೆಖಿಸಿದೆ.[೭] ಅದೇ ಶಾಸನದಲ್ಲಿ ಕನಕಗಿರಿನಾಥನಿಗೆ ನರಸಿಂಹದೇವ ರಾಜನು ಗೋಡಿರಹಾಳ ಗ್ರಾಮವನ್ನು ದಾನವಾಗಿ ಕೊಡುತ್ತಾನೆ. ಅದೇ ಶಾಸನದಲ್ಲಿ ಕನಕಗಿರಿ ನಾಥನಿಗೆ ಕೃಷ್ಣದೇವರಾಯ ಚಿಂನಾಪುರ ಸೀಮೆಯ ಗ್ರಾಮುಗಳನ್ನು ದಾನ ಬಿಡುತ್ತಾನೆ ಎಂದು ಉಲ್ಲೇಖಿಸಿದೆ. ಅದೇ ಶಾಸನದಲ್ಲಿ ಕನಕಗಿರಿನಾಥನಿಗೆ ಅಚ್ಯುತರಾಯ ದಾನ ನೀಡಿದ ಉಲ್ಲೆಖಿಸಿದೆ. ಹಿರೇಮಾದಿನಾಳ ಶಾಸನವೊಂದರಲ್ಲಿ ಇಮ್ಮಡಿ ವುಡಸಿನಾಯಕನು ಪ್ರಾಣೆಯನ್ನು ಕೊಂದ ವಿಠಲಾಪುರದ ವೀರಪ್ಪನ ಮಗ ಸೊಲಬಾಯಿಗೆ ೧೨ ಎಕರೆ ಗದ್ದೆಯನ್ನು ದಾನ ನೀಡಿದ ಎಂದು ಉಲ್ಲೇಖಿಸಿದೆ.[೮]

ರಾಣಿಯರು :

ಕರ್ನಾಟಕ ಇತಿಹಾಸದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ ಮಾತ್ರವಲ್ಲ ರಾಜಕೀಯ ಜೀವನದಲ್ಲಿ ರಾಣಿಯರು ಪ್ರಧಾನ ಪಾತ್ರವನ್ನು ವಹಿಸಿದರು. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನಾಳಲು ನೇಮಿಸುತ್ತಿದ್ದನು. ಸು. ೯೨೦ರಲ್ಲಿ ಬೂತುಗನ ಅರಸಿ ಕುರ್ಗ್ಗಲ್ಲನ್ನು ಆಳುತ್ತಿದ್ದಂತೆ ಒಂದು ಶಾಸನ ತಿಳಿಸುತ್ತದೆ. ಇನ್ನೊಂದು ಶಾಸನ ಶ್ರೀ ಮಟ್ಟಾಳುಕ್ಯ ಪೆರ್ಮಾನಡಿ ದೇವರ ಮಗಳು ಪಂಪಾದೇವಿಯು ರಾಜ್ಯಭಾರ ಮಾಡುತ್ತಿದ್ದಂತೆ ತಿಳಿಸುತ್ತದೆ.[೯] ಕನಕಗಿರಿ ಶಾಸನವೊಂದರಲ್ಲಿ ಇಮ್ಮಡಿ ವುಡಸಿನಾಯಕನ ಹೆಂಡತಿ ಚಿನ್ನಮ್ಮ ಕನಕರಾಯ ಕೆರೆಯನ್ನು ಕಟ್ಟಿಸಿದ ಉಲ್ಲೇಖಿಸಿದೆ.[೧೦]

ಮತ್ತೊಂದು ಕನಕಗಿರಿ ಶಾಸನವೊಂದರಲ್ಲಿ ವುಡಸಿನಾಯಕನ ಹೆಂಡತಿ ಚಿನ್ನಮ್ಮಳು ಬಸವಣ್ಣ ದೇವಾಲಯುವನ್ನು ಸಂಪೂರ್ಣವಾಗಿ ಕಟ್ಟಿಸಿದ್ದಳು ಎಂದು ಉಲ್ಲೇಖವಿದೆ.[೧೧] ಮತ್ತೊಂದು ಕನಕಗಿರಿ ಶಾಸನವೊಂದರಲ್ಲಿ ಇಮ್ಮಡಿ ವುಡಸಿ ನಾಯಕನ ಹೆಂಡತಿ ಚಿಂನಾಜಮ್ಮ ಕನಕಗಿರಿ ಸ್ವಾಮಿಜಿ ಪೌಳಿಗೆ ಕಲ್ಲು ಹಾಸಿಗೆ ಹಾಕಿಸಿದಳು.[೧೨] ಬಸ್ರಿಹಾಳ ಶಾಸನವೊಂದರಲ್ಲಿ ವುಡಸಿನಾಯಕನ ಹೆಂಡತಿ ಕನಕಮ್ಮ ಬಾವಿಯನ್ನು ಕಟ್ಟಿಸಿದಳು ಎಂದು ಉಲ್ಲೇಖವಿದೆ.[೧೩]

**ಮಂತ್ರಿಗಳು :**

ಪ್ರಾಚೀನ ಕರ್ನಾಟಕದ ದೊರೆಗಳು ದೊಡ್ಡ ಸೇನೆಯನ್ನು ಕಟ್ಟಿದರೂ ದೇಶವನ್ನಾಳುತ್ತಿದ್ದುದು ಸೈನ್ಯದ ಬಲದಿಂದಲ್ಲದೆ ನಾಗರೀಕ ಅಧಿಕಾರಿಗಳ ಬೆಂಬಲದಿಂದ. ರಾಜನು ತನ್ನ ಮಂತ್ರಿಗಳ ಮೂಲಕ ಆಡಳಿತವನ್ನು ನಡೆಸುತ್ತಿದ್ದನು. ಪ್ರಾಚೀನ ಕರ್ನಾಟಕದಲ್ಲಿ ಮಂತ್ರಿಪದವಿಯು ತಂದೆಯಿಂದ ಮಗನಿಗೆ ಹರಿದುಬರುತ್ತಿತ್ತು. ಪ್ರಾಚೀನ ಕರ್ನಾಟಕದ ದೊರೆಗಳ ಮಂತ್ರಿಮಂಡಲ ಅಥವಾ ಅಮಾತ್ಯ ಸಮಿತಿ ಎಂದರೆ ಹಿರಿಯ ಅಧಿಕಾರಿ ಎಂಬ ಅರ್ಥದಲ್ಲಿ ಬಳಕೆಯಾಗಿರುವಂತೆ ತೋರುತ್ತದೆ. ರಾಜನು ಮೂವರು ಐವರು ಅಥವಾ ಏಳು ಜನರಿರುವ ಮಂತ್ರಿಮಂಡಲವನ್ನು ರಚಿಸಿಕೊಂಡಿದ್ದಾರೆಂದು ಭಾವಿಸಬಹುದು.

ಮಂತ್ರಿಮಂಡಲದ ಮಂತ್ರಿಗಳನ್ನು ಮಹಾಪ್ರಧಾನಿ, ಮಹಾಮಾತ್ಯ ಎಂದು ಕರೆಯುತ್ತಿದ್ದರು. ಇವರನ್ನು ದಂಡನಾಥ, ಮಹಾದಂಡನಾಥ, ಸಂಧಿವಿಗ್ರಹಿ ಮುಂತಾದ ಹೆಸರುಗಳಿಂದ ಶಾಸನಗಳು ಕರೆದಿವೆ. ಅನೇಕ ಮಹಾಪ್ರಧಾನರು ದಂಡನಾಯಕರು ಅಂತ ಪುರಾಧ್ಯಕ್ಷರೂ ಆಗಿದ್ದರು. ದಂಡನಾಯಕ ಎಂಬ ವಿಶೇಷಣವು ಎಲ್ಲಾ ಮಂತ್ರಿಗಳಿಗೂ ಬಹುಮಟ್ಟಿಗೆ ಸಮಾನವಾದುದು. ದಂಡನಾಯಕ ಎನ್ನುವುದು ಸೇನಾಪತಿ ಪದವಿಗೆ ಇನ್ನೊಂದು ಹೆಸರಾಗಿದೆ. ಆನೆಗೊಂದಿ ಶಾಸನವೊಂದರಲ್ಲಿ ಬುಕ್ಕರಾಯನ ಮಗ ಹರಿಹರನ ದಂಡನಾಯಕನಾದ ಬೈಚದಂಡನಾಯಕನ ಮಗ ಇರುಗಪನು ಶಿಲಾ ಚೈತ್ಯಾಲಯವನ್ನು ನಿರ್ಮಿಸುತ್ತಾನೆ. ಇದಕ್ಕೆ ಬೈಚ ದಂಡನಾಯಕನು ದಾನ ನೀಡಿದ ಉಲ್ಲೇಖವಿದೆ.[೧೪]

ಈ ದಂಡನಾಯಕರ ವ್ಯಾಪ್ತಿಗೆ ಬರುವ ಪ್ರದೇಶಗಳಿಂದ ಸುಂಕವನ್ನು ಸಂಗ್ರಹಿಸುತ್ತಿರುವುದು ಮತ್ತು ಆಳ್ವಿಕೆ ಮಾಡುವ ಸಂದರ್ಭದಲ್ಲಿ ಕೆಲವು ಅಧಿಕಾರಿಗಳು ದೇವಾಲಯಗಳಿಗೆ ಪೂಜಾರಿಗೆ, ಕೆರೆಗೆ ಆದಾಯ ಸುಂಕದ ಕೆಲಭಾಗಗಳನ್ನು ಬಿಟ್ಟುಕೊಡುತ್ತಿದ್ದರು. ಇವರಿಗೆ ಸುಂಕವನ್ನು ಪ್ರಾಯಶಃ ಬೇರೆ ಬೇರೆ ಗ್ರಾಮಗಳಿಂದ ಬರುವ ಆದಾಯಗಳಿಂದ ನೀಡುತ್ತಿದ್ದರು.

**ಮಹಾಮಂಡಳೇಶ್ವರ (ಮಾಂಡಳಿಕ) :**

ಆಡಳಿತ ವಿಭಾಗವಾಗಿರುವ `ಮಂಡಲದ` ಕಲ್ಪನೆ ಪ್ರಾಚೀನವಾದುದ್ದು. ಮಂಡಲಕ್ಕೆ `ಪ್ರಾಂಥ್ಯ` ಪ್ರದೇಶ ಎಂದು ಕರೆಯಲಾಗಿದೆ. ಮಂಡಲ ಇಲ್ಲವೆ ಪ್ರಾಂಥ್ಯದ ಒಡೆಯ ಮಹಾಮಂಡಲೇಶ್ವರನಾಗಿರುತ್ತಿದ್ದ. ಮಹಾಮಂಡಲೇಶ್ವರ ಎಂದರೆ ವಿಸ್ತಾರವಾದ ಪ್ರದೇಶ ಅಥವಾ ಆ ಪ್ರದೇಶದ ಒಡೆಯ ಎಂದರ್ಥ. (ಅಂದರೆ ಮಂಡಲ ಪ್ರದೇಶ ಈಶ = ಒಡೆಯ) ಮಹಾಮಂಡಳೇಶ್ವರ ಎಂಬುವಕ್ಕೆ 'ಮಂಡಲಾಧಿಪತಿ', `ಮಾಂಡಲಿಕ', 'ಮಾಂಡಳಿಕ', ಮಂಡಲೇಶ್ವರ ಎಂಬ ಪರ್ಯಾಯ ಪದಗಳು ಇವೆ.

ವಿಸ್ತಾರವಾದ ಸಾಮ್ರಾಜ್ಯದ ಆಡಳಿತವನ್ನು ಚಕ್ರವರ್ತಿಯೊಬ್ಬನೇ ನೋಡಿಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ರಾಜ್ಯವನ್ನು ವಿವಿಧ ವಿಭಾಗಗಳಾಗಿ ವಿಂಗಡಿಸಲಾಗಿತ್ತು. ಇಂತಹ ವಿಭಾಗಗಳನ್ನು ಅಥವಾ ಮಂಡಲಗಳನ್ನು ವಂಶಪರಂಪರೆಯಾಗಿ ಬಂದ ಮಹಾಮಂಡಲೇಶ್ವರರು ರಾಜನ ಅನುಮತಿಯ ಮೇರೆಗೆ ಆಳುತ್ತಿದ್ದರು. ಇವರು ಚಕ್ರವರ್ತಿಗೆ ಅಧೀನರಾಗಿ ಪ್ರತಿವರ್ಷ ಕಪ್ಪಕಾಣಿಕೆಯನ್ನು ಕೊಡುತ್ತಿದ್ದರೆಂದು ಕಂಡುಬರುತ್ತದೆ. ಇವರು ವಂಶ ಪರಂಪರೆಯಾಗಿ ಬಂದ ಬಿರುದು ಮತ್ತು ರಾಜ ಚಿಹ್ನೆಗಳನ್ನು ಬಳಸುತ್ತಿದ್ದರು. ಮಹಾಸಾಮಂತರಾದ ಇವರು ಚಕ್ರವರ್ತಿಯ ಪ್ರೀತಿ ವಿಶ್ವಾಸಗಳಿಸಿ ಮಹಾಮಂಡಳೇಶ್ವರ ಎಂಬ ಪದವಿಯನ್ನು ಪಡೆದಿದ್ದರು. ಶಾಸನಗಳಲ್ಲಿ ಕಂಡುಬರುವ ಮಹಾಮಂಡಲೇಶ್ವರರು ಉನ್ನತ ಪದವಿಯನ್ನು ಗಳಿಸಿದವರಾಗಿ, ಅವರ ಬಿರುದುದಾವಳಿ, ಪ್ರಶಸ್ತಿಯನ್ನು ಉಲ್ಲೇಖಿಸಿವೆ. ೧೧ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ಆಳಿದ ರಾಜರ ಮಾಂಡಳಿಕರು ತಮ್ಮ ಅಧಿಕಾರದ ವಿಶ್ಲೇಷಣೆಗಳನ್ನು ತಮ್ಮ ಹೆಸರಿನ ಮುಂದೆ ಧರಿಸಿಕೊಳ್ಳುವ ರೂಢಿಯನ್ನು ಹೊಂದಿದ್ದರು. ನೊಳಂಬರಾಜರು ತಮ್ಮ ರಾಜರಾದ ಚಾಲುಕ್ಯ ಅರಸು ಜಗದೇಕಮಲ್ಲ, ತ್ರಿಲೋಕಮಲ್ಲ ಎಂಬ ವಿಶೇಷಣಗಳ ಜೊತೆಗೆ ತಮ್ಮ ಹೆಸರನ್ನು ಸೇರಿಸಿ ಶಾಸನಗಳಲ್ಲಿ ಬರೆಸಿ ಕೆಲವೊಮ್ಮೆ ಹೆಸರನ್ನು ಬಿಟ್ಟು ಚಾಲುಕ್ಯರ ಬಿರುದುಗಳನೊಂದಿಗೆ ಬರಿ ನೊಳಂಬ, ಪೆರ್ಮಾನಡಿ, ತ್ರಿಭುವನಮಲ್ಲ ಜಗದೇಕಮಲ್ಲ ಪಾಂದಳ, ಜಗದೇಕಮಲ್ಲ, ವೀರ ಪಾಂಡ್ಯದೇವ ಇತ್ಯಾದಿ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಶಾಸನಗಳಲ್ಲಿ ವಿಪ್ರ ಶಾಸನವೊಂದರಲ್ಲಿ "ಶ್ರೀಮಾನ್ ಮಹಾ ಮಂಡಳೇಶ್ವರಂ ತ್ರಿಭುನಮಲ್ಲ ಪಾಂಡ್ಯ ವೀರನೊಳಂಬ ಪಲ್ಲವ ಪೆರ್ಮಾನಡಿ ದೇವರು ಎಂದು ಉಲ್ಲೇಖವಿದೆ."[೧೯] ಈತ ಮಹಾಮಂಡಲೇಶ್ವರನಾಗಿದ್ದು ಈತನನ್ನು ಎಂದು ಕರೆಯುತ್ತದೆ. ಇವನು ತುಂಗಭದ್ರೆಯ ನದಿದಂಡೆಯ ತೀರದ ಕಂಪ್ಲಿ ಬೀಡಿನಿಂದ ಪಂಚ ಗ್ರಾಮಗಳನ್ನು ಆಳುತ್ತಿದ್ದನೆಂದು ಮೇಲಿನ ಶಾಸನದಲ್ಲಿ ಕಂಡುಬರುತ್ತದೆ.

ಹಿರೇಜಂತಗಲ್ ಶಾಸನವೊಂದರಲ್ಲಿ ಶ್ರೀಮನ್ ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಸದಾಶಿವರಾಯ ಮಹಾರಾಯರು ಪ್ರುಥ್ವಿರಾಜ ಮಾಡುತಿರಲು ಶ್ರೀಮನ್ ಮಹಾ ಮಂಡಲೇಶ್ವರ ರಾಮರಾಜಮಹಾಲಿಅರಸುಗಳ ತಮ್ಮ ತಿರುವೆಂಕಟಾದ್ರಿರಾಜ ಮಹಾ ಅರಸುಗಳ ಕಾರ್ಯಕ್ಕೆ ಚಂದ್ರಿಗಿರಿಯ ದೇವರಸೈಯ್ಯನವರು ಜಂತಗಲ್ಲ ಮಾಗಣಿಯ ದೇವರಾಯ ಬ್ರಹ್ಮದಾಯಗಳಿಗೆ ಬೀಜವರಿ ೧ ಕ್ಕೆ ಗಂ ಮರಿಯಾದಿಯಲ್ಲು ಆಳುತಿರಲಾಗಿ ತಾನು ಸದಾಶಿವರಾಯ ಮಹಾರಾಯರಿಗಳಿಗೆ ಪುಣ್ಯವಾಗಬೇಕೆಂದು ಸೋಮೋಪರಾಗ ಪುಣ್ಯ ಕಾಲದಲ್ಲಿ ಶ್ರೀ ಸದಾಶಿವರಾಯ ಮಹಾ ರಾಯರಿಗೆ ಬಿಂನಾಹಂ ಮಾಡಿ ಆ ಒಕಳದ ಗದೆ ವೊಂದು ಹೊನ್ನನ್ನು ಸರ್ವ ಮಾನ್ಯವನೂ ಮಾಡಿದ ಎಂದು ತಿಳಿಸುತ್ತದೆ.[೨೦] ಅಂದರೆ ಸದಾಶಿವರಾಯನು ಆಳುತ್ತಿದ್ದಾಗ ಅವನ ಮಹಾ ಮಂಡಲೇಶ್ವರನಾದ ರಾಮರಾಜನ ತಮ್ಮ ವೆಂಕಟಾದ್ರಿರಾಜನ ಕಾರ್ಯಕರ್ತನಾದ ಚಂದ್ರಗಿರಿಯ ದೇಮರಸ್ಯಯ್ಯನವರು ಸದಾಶಿವರಾಯನಿಗೆ ಪುಣ್ಯವಾಗಲೆಂದು ದಾನ ನೀಡಿದ ವಿಷಯ ತಿಳಿಸುತ್ತದೆ. ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ ರಾಜನ್ನಾಳುತಿರಲು ಸದಾಶಿವದೇವ ಮಹಾರಾಯರ ಕಾರ್ಯಕರ್ತರಾದ ಶ್ರೀ ಮಂಮಾ ಮಂಡಳೇಶ್ವರ ಶ್ರೀ ರಂಗರಾಜ ರಾಮರಾಜದೇವ ಮಹಾ ಅರಸುಗಳ ತಿಮ್ಮೋಜ, ಕೊಂಡೋಜ, ಭದ್ರೋಜ ಅವರಿಗೆ ತಿನ ಸೀಮೆ ವೊಳಗಣಾಲ ಎಂದು ಉಲ್ಲೇಖವಿದೆ.[೨೧] ಅಂದರೆ ಸದಾಶಿವರಾಯನು ಕಾಲದಲ್ಲಿ ಅವನ ಮಾಂಡಲಿಕನಾದ

ಶ್ರೀರಂಗರಾಜ ರಾಮರಾಜನ ಕ್ಷೌರಿಕರಾದ ತಿಮ್ಮೋಜ, ಕೊಂಡೋಜ, ಭದ್ರೋಜರಿಗೆ ದಾನ ನೀಡಿದ ವಿವರ ಉಲ್ಲೇಖಿಸುತ್ತದೆ. ಶಾಸನದ ಉಳಿದ ಭಾಗ ಭೂಮಿಯಲ್ಲಿ ಸೇರಿದೆ.

**ಸೇನ ಭೋವರು :**

ಗ್ರಾಮಗಳ ಲೆಕ್ಕಪತ್ರಗಳನ್ನು ಇವರು ಇಡುತ್ತಿದ್ದವರು ಶ್ಯಾನಬೋಗರು. ವಿದ್ಯಾವಂತರಾದ ಇವರು ಪ್ರತಿಯೊಂದು ಗ್ರಾಮದಲ್ಲಿ ಇರುತ್ತಿದ್ದರು. ಗ್ರಾಮದ ಆಡಳಿತ ವಿಷಯದಲ್ಲಿಯು ಪ್ರಮುಖ ಪಾತ್ರವಹಿಸುತ್ತಿದ್ದರು. ಕೆಲವೊಮ್ಮೆ ಶಾಸನಗಳನ್ನು ಬರೆಯುತ್ತಿದ್ದರು. ಇಂತವರ ಉಲ್ಲೇಖಗಳು ಗಂಗಾವತಿ ಶಾಸನಗಳಲ್ಲಿ ಕಂಡುಬರುತ್ತದೆ. ಹಿರೇಜಂತಗಲ್ ಶಾಸನವೊಂದರಲ್ಲಿ (ಕ್ರಿ.ಶ. ಕಾರ್ತಿಕ ೩) "ತೃಟಿತ.......... ರಗಿದ ಸೇನಭೋವ ನರಸಪ್ಪಯ್ಯವರಲು..... ಮಗ..... ವಗಣಗರಯೆ ಜಿನಬೋವ.... ಸಂಕಣಯಿ..... ಚೆನ್ನಯ ಮಗ.... ಸೆಟ್ಟರ ಸತಿಗೆ......... ದನೂರು ಹನಿಸೆಟ್ಟಿ.... ಯಮ್ಮವಿದಸಿ ಅಂಣ ಮೊ..... ಎಂದು ಉಲ್ಲೇಖವಿದೆ.[೧೮]

ಇದರಲ್ಲಿ ಸ್ಪಷ್ಟವಾದ ವಿಷಯ ತಿಳಿದುಬಂದಿಲ್ಲ. ಆದರೆ ಸೇನಬೋವ, ಎಂಬ ಹೆಸರನ್ನು ಮಾತ್ರ ಕಾಣುತ್ತದೆ. ಬರಗೂರು ಗ್ರಾಮದ ಶಾಸನದಲ್ಲಿ

"ಪಂಚಮೆಯಲು ಬರಗೂರ ಗೌಡ

ಶಾನುಭೋಗರು ಪಂಡಿತಾರಾಧ್ಯ ಸಿವಸ

ದೇವರಿಗೆ ವಿಭೂತಿ ಮೊದಲಾಗಿ ಶರಣ

ಮಾಡಿದ ಮಟ ಮಾನ್ಯ......

ಎಂದು ಉಲ್ಲೇಖವಿದೆ.[೧೯] ಅಂದರೆ ಬರಗೂರಿನ ಗೌಡ ಮತ್ತು ಶಾನುಬೋಗರು ಪಂಡಿತಾರಾಧ್ಯ ಶಿವ ದೇವನಿಗೆ ಮಾನ್ಯವಾಗಿ ಭೂಮಿಯನ್ನು ದಾನ ನೀಡಿದ್ದಾರೆ. ಕನ್ನೆರುಮಡು ಶಾಸನವೊಂದರಲ್ಲಿ

ಅಚ್ಚುತರಾಯ ಮಹಾರಾಯರಿಗೆ ಪುಂ

ಪುಣ್ಯವಾಗಬೇಕೆಂದು ಸಾಳುವದೇವರಾಯ ಕರು

ಮೂಡಿಗೆ ಯಲಬರಿಗೆಯ ನೇಮಗೆ ಸಲುವ ಸೂಳೆ

ಯಕೆರೆ ವೊಳಗಣ ಯಿಂಗುಳದಾ ಮಾಳಯ್ಯಂ

ಸೇನಭೋವನು ಅಂಗರಂಗಭೋಗ ಅಮೃತಪಡಿಗೆ

ನೀವೆದ್ಯಕ್ಕೆ ಸಮರ್ಪಿಸಿದರು ಎಂದು ಉಲ್ಲೇಖವಿದೆ.[೨೦]

ಅಂದರೆ ಸದಾಶಿವರಾಯನ ಆಳ್ವಿಕೆ ಕಾಲದಲ್ಲಿ ಸದಾಶಿವರಾಯನಿಗೆ ಮತ್ತು ಸಾಳುವ ದೇವರಾಯ ಇವರಿಬ್ಬರಿಗು ಮಾಳಯ್ಯ ಮತ್ತು ಸೇನಬೋವನು ಅಮರೇಶ್ವರ ದೇವರಿಗೆ ಅಂಗರಂಗಭೋಗಕ್ಕೆ ಅಮೃತಪಡಿ ನೈವೇಧ್ಯಕ್ಕೆ ಸಮರ್ಪಿಸಿದ ವಿಷಯ ತಿಳಿಸುತ್ತದೆ.

ಕುಳಕರಣಿ ಎಂಬಲ್ಲಿ ಕುಲ ಅಥವಾ ಕುಳ ಮತ್ತು ಕರ್ಣಿ ಎಂಬ ಎರಡು ಪದಗಳಿದ್ದು ಅವು ಕ್ರಮವಾಗಿ ಸಮೂಹ ಮತ್ತು ಕರಣಿಕತೆಗೆ (ಲೆಕ್ಕ ಬರೆಯುವುದು) ಎಂಬ ಅರ್ಥವನ್ನು ಹೇಳುತ್ತವೆ. ಕುಳಕರುಣಿಯು ಅಗ್ರಹಾರ ಬ್ರಾಹ್ಮಣ ಸಮೂಹದ ಲೆಕ್ಕವನ್ನು ನೋಡಿಕೊಳ್ಳುತ್ತಿದ್ದರು. ಕುಳಕರಿಣಿಯು ಮಹಾಜನರ ಗುಮಾಸ್ತನಿದ್ದಂತೆ ಅವರ ಅಧೀನರಾದ ಊರಿನ ಲೆಕ್ಕಪತ್ರಗಳನ್ನು ಇಟ್ಟುಕೊಂಡು ಮಹಾಜನರ ಪತ್ರ ವ್ಯವಹಾರವನ್ನು ನೋಡಿಕೊಳ್ಳುವ ವ್ಯಕ್ತಿಯಾಗಿದ್ದನು. ಹಿಗೆ ಸೇನಭೋವ ಮತ್ತು ಕುಳಕರಯಣಿಗಳು ಬೇರೆಯಾಗಿದ್ದರು, ಕೆಲಸದ ಸ್ವರೂಪ ಮಾತ್ರ ಒಂದೇ ಆಗಿರುವುದರಿಂದ ಇವರೆಡು ಪದಗಳನ್ನು ಸಮಾನಾರ್ಥದಲ್ಲಿ ಬಳಸತೊಡಗಿದ್ದರು. ಕುಲಕರಣಿಗಳು ಗ್ರಾಮದ ಲೆಕ್ಕಪತ್ರಗಳನ್ನು ಹಾಗೂ ನೀತಿ ನಿಯಮಗಳನ್ನು ಬರೆದು ಸಾರ್ವಜನಿಕರಿಗೆ ತಲುಪಿಸುವಂತೆ ಶಾಸನಗಳಲ್ಲಿ ಬರೆಸುತ್ತಿದ್ದರು. ಆದರೆ ಇಂತಹ ಶಾಸನಗಳು ಗಂಗಾವತಿ ತಾಲೂಕಿನಲ್ಲಿ ಕಂಡುಬರುವುದಿಲ್ಲ.

**ಹೆಗ್ಗಡೆಗಳು, ಪೆರ್ಗ್ಗಡೆ :**

ಅರಸರ ಪಾದಪದ್ಮೋಪ ಜೀವಿಗಳಾಗಿ ಆಳುತ್ತಿದ್ದ ಪೆರ್ಗ್ಗಡೆಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಇವರು ವಿಭಾಗ ಇಲ್ಲವೆ ಉಪವಿಭಾಗಗಳನ್ನು ಆಳುವ ರಾಜವಂಶಿಯರಂತೆ ವಂಶಪರಂಪರೆಯಾಗಿ ಮುಂದುವರಿಯದೆ ತಮ್ಮ ರಕ್ಷಣೆ ಶೌರ್ಯ ಸಾಹಸಗಳಿಂದಾಗಿ ಕೆಲಸಗಳನ್ನು ಪಡೆಯುತ್ತಿದ್ದರು. ಇವರನ್ನು ಹೆಗ್ಗಡೆ ಎಂದು ಕರೆಯಲಾಗಿದೆ. ಅಂದರೆ ಅಂದಿನ ಪೆರ್ಗ್ಗಡೆಗಳೇ ಇಂದಿನ ಹೆಗ್ಗಡೆಗಳೆನಿಸಿದ್ದಾರೆ. ಇವರಲ್ಲಿ ತಳ, ವೃತ್ತಿ, ಹೆಗ್ಗಡೆ, ಪೆರ್ಗ್ಗಡೆ ಸುಂಕಪೆರ್ಗ್ಗಡೆ ರಾಜ ಸಾಮ್ರಾಜ್ಯಗಳ ಪೆರ್ಗ್ಗಡೆ ಕಡಿತ ಪೆರ್ಗ್ಗಡೆ ಮನೆ ಪೆರ್ಗ್ಗಡೆ ಹೀಗೆ ಮುಂತಾದವರನ್ನು ಉಲ್ಲೇಖಿಸುತ್ತವೆ. ಹೆಬ್ಬಾಳ ಶಾಸನವೊಂದರಲ್ಲಿ

........ ಹೆಗ್ಗಡೆ ಸಹವಾಸಿ ಅರ್ಜುನ.............

ಮೊಲ್ಗೆನಾಯಕರ" ಎಂದು ಉಲ್ಲೇಖವಿದೆ.[20]

**ಗ್ರಾಮಾಡಳಿತ :**

ಊರುಗಳು ಗ್ರಾಮಗಳು ಬೆಳೆದು ಇಲ್ಲವೆ. ಮಾರ್ಪಾಡಾಗಿ ಪಟ್ಟಣಗಳು, ಅಗ್ರಹಾರಗಳೆನಿಸಿರುವುದರಿಂದ ಉರಾಡಳಿತದಲ್ಲಿ ಪಟ್ಟಣ ಅಗ್ರಹಾರ ಹಳ್ಳಿಗಳ ಸೇರ್ಪಡೆಯಾಗುತ್ತವೆ. ಊರು, ಹಳ್ಳಿ, ಗ್ರಾಮಗಳು ಮೊದಲಾದವು ಕೆಲವು ಜನಾಂಗಳ ನೆಲೆಯಾಗಿ ಬೆಳೆದ ಸ್ಥಳಗಳಾದರೆ ಮಠಪಟ್ಟಣಗಳು ಸಕಲ ನಾಗರಿಕ ಸೌಲಭ್ಯಗಳನ್ನು ಪಡೆದ ವಿಸ್ತೃತರೂಪಗಳೆನ್ನಬಹುದು.

ಉದಾ 'ಪುರ' ಎನಿಸಿಕೊಳ್ಳಬೇಕಾದರೆ ಅದರ ಸುತ್ತಮುತ್ತ ತೋಪುಗಳು ಬಹು ಜನರವಾಸ, ಮಾರಾಟಗಾರರು, ಕೊಳ್ಳುವವರು ಕಿಕ್ಕಿರಿದು ತುಂಬಿದ ಗದ್ದಲದಿಂದ ಕೂಡಿರುತ್ತದೆ. ದೇವಸ್ಥಾನಗಳಿಂದ ರಾರಾಜಿಸುತ್ತಿರುತ್ತದೆ. ಸಂತೆ ನಡೆಯುವುದು ಪಟ್ಟಣಗಳಲ್ಲಿ ಹೆಚ್ಚು ಇಂತಹ ಊರು ಹಳ್ಳಿಗಳು ಬ್ರಾಹ್ಮಣರಿಗೆ ದತ್ತಿಯಾಗಿ ಬಿಟ್ಟು ಪ್ರದೇಶಗಳಾಗಿರುತ್ತವೆ.

**ಪಟ್ಟಣಗಳ ಆಡಳಿತ :**

ಪಟ್ಟಣಗಳ ಆಡಳಿತವನ್ನು ಪಟ್ಟಣ ಸ್ವಾಮಿಗಳು ನೋಡಿಕೊಳ್ಳುತ್ತಿದ್ದರು ಎಂದು ಶಾಸನಗಳಲ್ಲಿ ಬಂದಿದೆ. ಆನೆಗೊಂದಿ ಶಾಸನವೊಂದರಲ್ಲಿ

| ಅವಧಾರಿಸಿ ಸ್ವಾಮಿಗಳಿರಾ | ಚೆಲವಲಂಕೊಂಡಾ

ಡುವ ಸ್ವಾಮಿಗಳವಧಾರಿಸಿ | ಬಲುಹು ಕೊಂಡಾಡುವ ಸ್ವಾಮಿಗಳಧಾ (ಧಿ)

ರಿಸಿ ಸ್ವಾಮಿಂಬುಸೆಟ್ಟಿಗಳ(ವ) ಧಾರಿಸಿ | ಪಸುಂಬೆಸೆಟ್ಟಿ ಸ್ವಾಮಿಗಳ

(ವಧಾ) ರಿಸಿ ಕೊಂಕಣ ಸಧಾರಸಂತಪ್ಪಾಸ್ವ (ಸ್ವಾ) ಮಿಗಳವಧಾರಿಸಿ | ವೇಲು

"ಪಟ್ಟಣ ಸ್ವಾಮಿಗಳವಧಾರಿಸಿ" ಎಂದು ಉಲ್ಲೇಖವಿದೆ.[೨೨] ಇದರಿಂದ ಪಟ್ಟಣ ಸ್ವಾಮಿ ಊರಿನ ವ್ಯಾಪಾರಸ್ಥನಾಗಿದ್ದನು. ಪಟ್ಟಣಗಳು ವ್ಯಾಪಾರ ಕೇಂದ್ರಗಳಾಗಿರುವುದರಿಂದ ಅಲ್ಲಿನ ಪ್ರತಿಯೊಂದು ಕಾರ್ಯದ ವರ್ತಕರ ಪ್ರಭಾವವನ್ನು ಅಲ್ಲಿನ ಶಾಸನಗಳಿಂದ ಗುರುತಿಸಬಹುದು. ವಿವಿಧ ವೃತ್ತಿ ವ್ಯಾಪಾರಗಳನ್ನು ಕೈಗೊಂಡ ಇವರು ತಮ್ಮದೇ ಆದ ಸಂಘ ಸಂಸ್ಥೆಗಳನ್ನು ಹೊಂದಿ ಸಾಮಾಜಿಕ, ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದಾಗ ಮತ್ತು ವಿವಿಧ ವರ್ಗದ ಇತರರೊಂದಿಗೆ ದಾನ ಮತ್ತು ಪ್ರತಿಪಾಲನೆ ಕೆಲಸವನ್ನು ಯಶಸ್ವಿಯಾಗಿ ನಿರ್ವಹಿಸುತ್ತಿದ್ದರು. ನಾನಾ ದೇಶಿಗಳು, ಸಾಸ್ಸಿರ್ವರು, ತಂಬುಲಿಗರು, ಸೆಟ್ಟಿಗಳು ಸ್ವಾಮಿಗಳು ಐನೂರ್ವರು ಗೌಡಸ್ವಾಮಿಗಳು ವಡ್ಡವ್ಯವಹಾರಿಗಳು, ಏಕಸ್ಥರಾಗಿ ದತ್ತಿ ಬಿಟ್ಟಿರುವುದು ಮತ್ತು ಅವರೆಲ್ಲ ಒಂದೆಡೆ ಸೇರಿ ನಿರ್ಧರಿಸಿದ ಸ್ಥಳ ದಿನಗಳಲ್ಲಿ ನೆರೆಯುತ್ತಿದ್ದ ವರ್ತಕರ ಪರಸ್ಪರ ಸಹಕಾರ ಸಹಬಾಳ್ವೆ ಎದ್ದು ಕಾಣುತ್ತದೆ. ಇವರಲ್ಲಿ ದೊಡ್ಡ ಪ್ರಮಾಣದ ವರ್ತಕರು ವ್ಯಾಪಾರವನ್ನು ಕೈಗೊಂಡ ಸ್ಥಿತಿವಂತರು ದೇವಾಲಯಗಳನ್ನು ಕಟ್ಟಿಸಿದ್ದಾರೆ. ಪಟ್ಟಣಗಳ ವರ್ತಕರಲ್ಲಿಯೇ ಮುಖ್ಯಸ್ಥನೊಬ್ಬನಿದ್ದು ಅವರನ್ನು ಪಟ್ಟಣಸ್ವಾಮಿ ಎಂದು ಕರೆಯಲಾಗಿತ್ತು. ಪಟ್ಟಣಸ್ವಾಮಿಗಳು ಸಹ ದೇವರಿಗೆ ದೇವಾಲಯಕ್ಕು ದಾನ ನೀಡಿರುವುದು ವಿವರಿಸುತ್ತವೆ. ವಿಪ್ರ ಶಾಸನವೊಂದರಲ್ಲಿ (ಕ್ರಿ.ಶ. ೧೦೫೯) ಅಂದರೆ ಎಲೆಕಾರರು (ಪತ್ನಿವಣಕ್ಕದವರು) ೧೦೦ ಎಲೆಯನ್ನು ಅಂದಕ್ಕ ೫೦ ಎಲೆಯನ್ನು ಬಿಟ್ಟುಕೊಟ್ಟರು ಎಂದು ತಿಳಿಸುತ್ತದೆ.[೨೩]

ಹೀಗೆ ಪಟ್ಟಣಗಳನ್ನು ಪಟ್ಟಣಗಳ ಉಪ ವಿಭಾಗಗಳಲ್ಲಿನ ಇವುಗಳ ಆಡಳಿತವನ್ನು ನೋಡಿಕೊಳ್ಳಲು ಸಾಮಂತ, ಮಂಡಲೇಶ್ವರರೊಂದಿಗೆ ಮನ್ನೆಯರು ಮತ್ತು ಇತರ ಅಧಿಕಾರಿಗಳು ಅಲ್ಲಿ ವಾಸಿಸುತ್ತಿದ್ದರು. ಈ ರೀತಿಯಿಂದ ಪಟ್ಟಣದ ಆಡಳಿತ ಇತ್ತು ಎಂದು ಕಂಡುಬರುತ್ತದೆ. ಪಟ್ಟಣದ ಆಡಳಿತದಲ್ಲಿ ಹೆಗ್ಗಡೆ (ಪೆರ್ಗ್ಗಡೆ) ಪಾತ್ರವು ಮುಖ್ಯವಾಗಿತ್ತು. ಹೆಗ್ಗಡೆ ಸುಂಕದ ಅಧಿಕಾರಿಗಳು ಮಾತ್ರ ಆಗಿದ್ದರೆಂದು ಸಾಗಯ್ಯನವರು ತಪ್ಪಾಗಿ ಭಾವಿಸುತ್ತಾರೆ. ಏಕೆಂದರೆ ಎಲ್ಲಾ ಅಧಿಕಾರಿಗಳು (ಹೆಗ್ಗಡೆಗಳು) ಸುಂಕದ ಅಧಿಕಾರಿಗಳಾಗಿರಲಿಲ್ಲ ಕೆಲವರು ಮಾತ್ರ ಇದ್ದರೆಂದು ತಿಳಿಯಬಹುದು. ಕೆಲವರು ಗ್ರಾಮದ ಅಧಿಕಾರಿಗ ಊರಿನ ಒಡೆಯರು ಆಗಿದ್ದರು.

**ಸಣ್ಣ ಘಟಕ ಹಳ್ಳಿ ಉಪವಿಭಾಗ :**

ಹಳ್ಳಿಯು ಸಹ ಆಡಳಿತ ಉಪವಿಭಾಗಗಳಲ್ಲಿ ಒಂದು ಸಣ್ಣ ಘಟಕವಾಗಿತ್ತು. ಆಡಳಿತದ ತೀರಾ ಚಿಕ್ಕ ಘಟಕವೆನ್ನಬಹುದು. ಹಿಂದೆ ಹೇಳಿದ ಹಾಗೆ ಅಗ್ರಹಾರ ಪಟ್ಟಣಗಳು ಹೆಚ್ಚಾಗಿ ಉಪವಿಭಾಗದ ಮುಖ್ಯಸ್ಥಳಗಳಾಗಿರುತ್ತಿದ್ದವು. ಇವುಗಳಿಗೆ ಆಡಳಿತದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಇದ್ದವು. ಇಂತಹ ಘಟಕಗಳಾದ ಬಹುಪಾಲು ಹಳ್ಳಿಗಳೇ ಆಡಳಿತದ ಸಣ್ಣ ಘಟಕಗಳು ಹಳ್ಳಿಗಳು ಯುದ್ಧಗಳಂತಹ ಮತ್ತು ಅನಿವಾರ್ಯ ಸಮಯದಲ್ಲಿ ಅಗತ್ಯಗುಣವಾಗಿ ಸಹಾಯ ಮಾಡುತ್ತಿದ್ದರು. ಯಾವುದೇ ಒಂದು ಊರು ಈ ಹಳ್ಳಿ ಪಟ್ಟಣ ಮತ್ತು ಗ್ರಾಮಗಳೆನಿಸಿಕೊಳ್ಳಬೇಕಾದರೆ ಅದು ಯಾವ ಯಾವ ಅನುಕೂಲತೆಗಳನ್ನು ಸೌಲಭ್ಯಗಳನ್ನು ಒಳಗೊಂಡಿದೆ ಎಂಬುದನ್ನು ಯಾವುದೇ ಶಾಸನಗಳಾಗಲಾ, ಕಾವ್ಯಗಳಾಗಲೀ ತಿಳಿಸುವುದಿಲ್ಲ. ಮನುಷ್ಯನನ್ನು ಸಂಘಜೀವಿಯಾಗಿ ಒಂದೆಡೆ ನೆಲೆನಿಂತ ಸ್ಥಳಗಳಾಗಿರಬೇಕು ಮುಂದೆ ಹಳ್ಳಿಗಳಾಗಿ ನಗರಗಳಲ್ಲಿ ಬೆಳೆದಿರಬೇಕು ಒಂದು ಊರನ್ನು ಮತ್ತೊಂದು ಊರಿನಿಂದ ಪ್ರತ್ಯೇಕಗೊಳಿಸಲು ಅಲ್ಲಿನ ಪ್ರಾಕೃತಿಕ ವ್ಯವಸ್ಥೆಯೊಂದಿಗೆ ಗ್ರಾಮ ನಾಮಗಳು ಸಹಾಯಕವಾಗಿವೆ. ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖ ಆರ್ಥಿಕ ಮೂಲಗಳಾದ ಹಳ್ಳಿಗಳು ವರಮಾನ ಮತ್ತು ಜನಜೀವನದ ಚಿತ್ರಣಗಳನ್ನು ಶಾಸನಗಳು ಉಲ್ಲೇಖಿಸುತ್ತವೆ.

ಹಿರೇಜಂತಗಲ್ ಶಾಸನವೊಂದರಲ್ಲಿ ಸದಾಶಿವರಾಯನ ಮಾಂಡಲಿಕನಾದ ರಾಮರಾಜನ ತಮ್ಮನಾದ ವೆಂಕಟಾದ್ರಿಯ ಕಾರ್ಯಕರ್ತನಾದ ಚಂದ್ರಗಿರಿಯ ದೇಮರಸಯ್ಯನು ಚಿಕ್ಕಜಂತಗಲ್ ಗ್ರಾಮದ ಮಾಗಾಣಿ ದೇವದಾಯ ಬ್ರಾಹ್ಮಣಗಳಿಗೆ ಒಂದು ವೊಕ್ಕಳ ಗದ್ದೆಯನ್ನು ಸರ್ವಮಾನ್ಯವಾಗಿ ಬಿಡುತ್ತಾನೆ ಎಂದು ಉಲ್ಲೇಖವಿದೆ.[೨೪] ಮತ್ತೊಂದು ಆನೆಗೊಂದಿ ಶಾಸನವೊಂದರಲ್ಲಿ ತಿರುಮಲರಾಜಯ್ಯನು ಅಂಬಿಗರಿಗೆ ರಾಮಾಪುರ ಗ್ರಾಮದ ಒಂದು ಖಂಡುಗ ಗದ್ದೆಯನ್ನು ನೀಡಿದ್ದನು ಎಂದು ಉಲ್ಲೇಖವಿದೆ.[೨೫] ಮತ್ತೊಂದು ಹನುಮನಹಳ್ಳಿ ಗ್ರಾಮದ ಶಾಸನವೊಂದರಲ್ಲಿ ಕ್ರಿ.ಶ. ೧೬ನೆಶ ಹನಿಯ ನಾಗಣನು ಅಂಜನಾ ದೇವಿಯ ಮತ್ತು ಹನುಮಂತ ದೇವರ ಅಮೃತಪಡಿಗೆ ಮಾನ್ಯವಾಗಿ ರಾಮಪುರದಲ್ಲಿ ಹೊಲ ಗದ್ದೆ ದಾನ ನೀಡುತ್ತಾನೆ ಎಂದು ಉಲ್ಲೇಖವಿದೆ.[೨೬] ಮತ್ತೊಂದು ರಾಮದುರ್ಗ ಗ್ರಾಮದ ಶಾಸನವೊಂದರಲ್ಲಿ ಇದರಲ್ಲಿ ರಾಜನ ಹೆಸರು ಉಲ್ಲೇಖವಿಲ್ಲ. ಅವನ ಬಿರುದು ಮಾತ್ರ ಉಲ್ಲೇಖವಿದೆ. ಗ್ರಾಮಾನ್ ಮಹಾಮಂಡಲೇಶ್ವರ ರಾಮರಾಜ ಮಹಾರಸು ಆನೆಗೊಂದಿಯ ಚಪ್ಪರದ ಹನಮಂತ ದೇವರಿಗೆ ಸಂಗಮಾಪುರದ ೧.೨ ಹರಳಿ ಗದ್ದೆಯನ್ನು ದಾನ ನೀಡಿದ ಉಲ್ಲೇಖವಿದೆ.[೨೭] ಮತ್ತೊಂದು ಕನ್ನೆರುಮಡು ಗ್ರಾಮದ ಶಾಸನವೊಂದರಲ್ಲಿ ಕ್ರಿ.ಶ. ೧೨.೪.೧೫೩೦ರಲ್ಲಿ "ಅಚ್ಯುತ ದೇವರಾಯನಿಗೆ ಪುಣ್ಯವಾಗಲೆಂದು ಸಾಳುವ ದೇವರಾಯನು ಯಲಬರಿಗೆಯ ಸೀಮೆಯ ಸೆರುವ ಸೂಳೆಯ ಕೆರೆಯ ಗದ್ದೆಯನ್ನು ನೀಡುತ್ತಾನೆ ಎಂದು ಉಲ್ಲೇಖವಿದೆ.[೨೮] ಮತ್ತೊಂದು ಗುಂಡೂರು ಶಾಸನವೊಂದರಲ್ಲಿ ಕ್ರಿ.ಶ. ೧೫೩೦ರಲ್ಲಿ "ಕಂಸೆಪ ಒಡೆಯನ್ನು ಬೆಂಬಲ ಕೋಟೆಯ ನಾಗನಾಥ ದೇವರಿಗ ಗುಂಡೂರು ಗ್ರಾಮದ ಹೊಸದಾಗಿ ನೀಡಿದ ಐಗುಳ (೫ ಕೊಳಗ) ಭೂಮಿಯನ್ನು ದಾನ ನೀಡಿದ. ಇದರಿಂದ ಗ್ರಾಮದ ಹೊಲವನ್ನು ದಾನ ನೀಡಿದರೆಂದು ತಿಳಿಸುತ್ತಾರೆ. ಆದರೆ ಮೇಲೆ ಅಥವಾ ಗಡಿಗಳನ್ನು ಸಹ ಉಳಿಸಿಗೊಳ್ಳುತ್ತವೆ.[೨೯]

ಇನ್ನು ಕೆಲವು ಶಾಸನಗಳನ್ನು ದಾನ ನೀಡಿದನ್ನು ಉಲ್ಲೇಖಿಸುತ್ತದೆ. ಚಿಕ್ಕ ಜಂತಗಲ್ ಶಾಸನವೊಂದರಲ್ಲಿ "ಶ್ರೀ ಮತು ಮಲ್ಲಜಗಲಿಯ ಮಗ... ಜಗಲಿ ತಂಮ ಹನುಮಜಗಲಿಗೆ | ಹಿರೆಜಂತಗಲ ಮಾದಿಗ ಉಡುಪ ಜಗಲಿಯ ಯನಾ ತೆಂತಜಗಲಿಯ ಮಗ ಉಡುಸನು ಲಖಜಗಲಿಯ ಮಗ ಕಂಪನು ನಾವು ಮೂವರೊಟ್ಟು ನಿಂತು ಯಬರಿ (ಗ್ರಿ)ಗ ತಂಮ ತಂಲಿ ಲಖಾಯಿ ಗದಾಯು ಯಿಬರನು ನಿಂಮ ಯಬರಿಗೆ ಮದುವೆನೂ ಮಾ (ಡಿ) ಚಿಕಜೆಂತಗು ಗ್ರಾಮದ ವೊಳಗಣ ಅರಪಾಲ ವೊಳಗಣ

**ಟಿಪ್ಪಣಿಗಳು**

೧. ಕ.ವಿ.ವಿ ಶಾಸನ ಸಂ ೨ ಗಂಗಾವತಿ ತಾಲೂಕು ೩೯

೨. ಅದೇ ೧೯

೩. ಅದೇ ೨೬

೪. ಅದೇ ೩೮

೫. ಅದೇ ೬೦

೬. ಅದೇ ೬೪

೭. ಅದೇ ೮೦

೮. ಅದೇ ೮೫

೯. ಕ.ವಿ.ವಿ ಶಾಸನ ಸಂ ೨ ಗಂಗಾವತಿ ತಾಲೂಕು ೭೫

೧೦. ಅದೇ ೭೮

೧೧. ಅದೇ ೭೯

೧೨. ಅದೇ ೮೯

೧೩. ಅದೇ ೨೧

೧೪. ಅದೇ ೧

೧೫. ಅದೇ ೩

೧೬. ಅದೇ ೯೧

೧೭. ಕ.ವಿ.ವಿ, ಸಂ ೨, ಗಂ ತಾ ೧೦೨

೧೮. ಅದೇ ೧೮

೧೯. ಅದೇ ೨

೨೦. ಅದೇ ೨

೨೧. ಅದೇ ೧೦೨

೨೨. ಅದೇ ೩

೨೩. ಅದೇ ೩೮

೨೪. ಅದೇ ೬೩

೨೫. ಅದೇ ೯೧

೨೬. ಅದೇ ೯೯

೨೭. ಅದೇ ೧೭

೨೮. ಅದೇ ೨೫

೨೯. ಅದೇ ೮೦

# ಅಧ್ಯಾಯ ಐದು

## ಆರ್ಥಿಕ ಅಧ್ಯಯನ

**ಆರ್ಥಿಕ ವ್ಯವಸ್ಥೆ :**

ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯನ್ನು ಅರಿಯಲು ಶಾಸನಗಳು ವಿಫುಲವಾದ ಸಾಮಗ್ರಿಗಳನ್ನು ಅರಿಯಲು ಒದಗಿಸುತ್ತವೆ. ಶಾಸನಗಳನ್ನು ಆಳವಾಗಿ ಅಭ್ಯಾಸ ಮಾಡುವಲ್ಲಿ ಆರ್ಥಿಕ ವ್ಯವಸ್ಥೆ ಒಂದು ಸಮಗ್ರ ಚಿತ್ರವನ್ನು ರೂಪಿಸಿಕೊಡುವುದು ಕಷ್ಟವಾಗಲಾರದು. ಆ ಸಮಗ್ರ ಚಿತ್ರಣವು ದೊರೆಯಬೇಕಾದರೆ ಆರ್ಥಿಕ ವ್ಯವಸ್ಥೆಯ ದೃಷ್ಟಿಯಿಂದಲೇ ಶಾಸನವನ್ನು ಅಧ್ಯಯನ ಮಾಡಬೇಕು. ಆರ್ಥಿಕ ವ್ಯವಸ್ಥೆಯನ್ನು ಅರಿಯಲು ಬಯಸುವಲ್ಲಿ ಕ್ರಿ.ಶ. ೧೦ನೆಯ ಶಾಸನಗಳಲ್ಲಿ ವಿಫಲ ಸಾಮಗ್ರಿ ದೊರೆಯುತ್ತದೆ. ಜೊತೆಗೆ ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆ ಒಂದು ಸ್ಥೂಲ ಚಿತ್ರಣದಿಂದಲೇ ನೋಡಬೇಕಾಗಿದೆ.

**೧. ಕೃಷಿ :**

ನಮ್ಮ ದೇಶದ ಗ್ರಂಥಗಳಾದ ಋಗ್ವೇದ, ಯಜುರ್ವೇದ, ಅಥರ್ವವೇದಗಳಲ್ಲಿ ನಾವು ನೀರಾವರಿಯ ಬಗೆಗೆ ಅನೇಕ ಪದಗಳಿರುವುದನ್ನು ಕಾಣಬಹುದಾಗಿದೆ. ಅವತ, ಕೂಪ, ಕುಲ್ಯ, ಖನಿತ್ರಿಮ, ಅಂದರೆ ಭೂಮಿಯನ್ನು ತೋಡಿ ನೀರು ತೆಗೆಯುವುದು, ಸಾಸಾಸಿ ಅಂದರೆ ಅಣೆಕಟ್ಟು ಅಥವಾ ಸರೋವರಗಳು, ಕೃತ್ರಿಮ ನದಿಯಾ ಅಂದರೆ ಕೃತ್ರಿಮವಾಗಿ ನದಿಗೆ ಕಟ್ಟಿ, ಮುಂತಾಗಿ ಕೌತುಕದ ಸಂಗತಿ ಎಂದರೆ ಜಲಾಶಯ ಶಾಸ್ತ್ರಕ್ಕೆ ಸಂಬಂಧಿಸಿದಂತೆ ವಿಪುಲ ಸಾಹಿತ್ಯ ಕೃತಿಗಳಿದ್ದವು.[೧]

ಮಹಾಭಾರತದ ಅನುಶಾಸನ ಪರ್ವದಲ್ಲಿ ರಾಜರು ಮಾಡಬೇಕಾದ ಕರ್ತವ್ಯಗಳ ಬಗೆಗೆ ವಿವರಿಸಲಾಗಿದೆ. ಅದರಲ್ಲಿ ಕೆರೆ ಕಾಲುವೆಗಳನ್ನು ನಿರ್ಮಿಸುವಂತೆ ಹೇಳಲಾಗಿದೆ.

ನಾರದ ಮಹರ್ಷಿಯು ಯುಧಿಷ್ಠರನಿಗೆ ನೀಡಿದ ಉಪದೇಶದಂತೆ ರಾಜನಾದವನು ಕೃಷಿಗಾಗಿ ಕೇವಲ ಮಳೆಯನ್ನೇ ಆಧರಿಸಿದೆ ಕೆರೆ, ಕುಂಟೆ, ಸರೋವರಗಳನ್ನು ನಿರ್ಮಿಸಿ ಅವುಗಳಲ್ಲಿ ಮಳೆನೀರನ್ನು ಹಿಡಿದಿಡುವಂತೆ ಹೇಳುವುದು ಗಮನಾರ್ಹ ಸಂಗತಿ.[೨]

ಸಾಗುವಳಿಯ ಜಮೀನನ್ನು ದೇವಮಾತೃಕೆ ಮತ್ತು ನದಿ ಮಾತೃಕೆಗಳೆಂದು ಸ್ಥೂಲವಾಗಿ ವಿಂಗಡಿಸಬಹುದು. ಕೇವಲ ಮಳೆಯ ನೀರನ್ನು ಆಶ್ರಯಿಸಿ ಬೆಳೆಯುವ ಹೊಲಗಳು ದೇವಮಾತೃಕೆಗಳು. ನದಿಕೆರೆ ಮುಂತಾದವುಗಳನ್ನು ಆಶ್ರಯಿಸುವ ಹೊಲಗಳು ನದಿ ಮಾತೃಕೆಗಳು. ಈ ವಿಭಜನೆಯನ್ನು ಕನ್ನಡ ಶಾಸನಗಳಲ್ಲಿ ಬಿಟ್ಟರೆ (ಬೆದ್ದಲೆ) + ಗದ್ದೆ ಗದ್ದೆಗಳೆಂದು ಕರೆದಿರುವುದು ಬೇಡಮಣೆ, (ಬೆದ್ದಲೆ) ಎನ್ನುವ ಪದಗಳು ಭೂಮಿಯನ್ನು ಸೂಚಿಸುತ್ತದೆ.

**ಏತ ನೀರಾವರಿ ವ್ಯವಸ್ಥೆ :**

ಏತ ಮಾದರಿಯ ನೀರಾವರಿ ವ್ಯವಸ್ಥೆಗಳು ಕ್ರಿ.ಶ. ಪೂರ್ವಕಾಲದಿಂದಲೂ ಜಾರಿಯಲ್ಲಿದೆ. ಈ ವಿಷಯವನ್ನು ವ್ಯವಸ್ಥೆಯಿಂದ ನೀರನ್ನು ಮೇಲೆ ಎತ್ತುವ ಬಗೆಗೆ ಸಾಗಿತ್ತು. ಶಿಲಾಶಾಸನಗಳಲ್ಲಿ ಪ್ರಸ್ತಾಪಿಸಲಾಗಿದೆ. ಋಗ್ವೇದದಲ್ಲಿ "ಅಸ್ಮಾಚಕ್ರ" ಎಂಬ ಪದವನ್ನು ಉಪಯೋಗಿಸಲಾಗಿದ್ದು, ಒಂದು ಅಭಿಪ್ರಾಯದಂತೆ ಇದು ನೀರನ್ನು ಎತ್ತುವ ಸಾಧನವಾಗಿತ್ತು.[೬] ಗಾತಸಪ್ತಸತಿ ಎಂಬ ಗ್ರಂಥದಲ್ಲಿ ನೀರನ್ನು ಎತ್ತುವ ಯಂತ್ರಕ್ಕೆ ರಹಟ್ಟಿ ಗಡಿಯ ಎಂದೆ ಕರೆದಿದ್ದು ಅದು ಉಪಕರಣದಂತಿದೆ. ಈ ಮಾದರಿಯ ನೀರನ್ನು ಎತ್ತುವ ಯಂತ್ರಗಳು ವಿವಿಧ ಪ್ರದೇಶಗಳ ವಿವಿಧ ಮಾದರಿಯನ್ನು ಹೊಂದಿದ್ದವು. ಗುಪ್ತಾರ ಕಾಲದಲ್ಲಿ (ಅಮರಕೋಶ)ದಲ್ಲಿ ಘಟಿಯಂತ್ರದ ಸಹಾಯದಿಂದ ಬಾವಿಗಳಲ್ಲಿ ನೀರನ್ನು ಎತ್ತಲಾಗುತ್ತಿತ್ತು. ಎಂದೆ ಹೇಳಿದೆ. ಕೌಟಿಲಿನ ಅರ್ಥಶಾಸ್ತ್ರದಲ್ಲಿ ಆಹಾರ ದಾನ್ಯಗಳನ್ನು ಕೃತಕ ನೀರಾವರಿ ಕಾಲುವೆಗಳಿಂದ ನೀರನ್ನು ಹರಿಸುವ ಏತ ನೀರಾವರಿ ಕಪ್ಪಲಿ ಅಂದರೆ ಎತ್ತುಗಳಿಂದ ನೀರನ್ನು ಎತ್ತುವ ಮುಂತಾದ ತಾಂತ್ರಿಕ ವ್ಯವಸ್ಥೆಯ ಮೂಲಕ ಬೆಳೆಯುತ್ತಿದ್ದುದನ್ನು ಉಲ್ಲೇಖಿಸುತ್ತದೆ.

**ನೀರಾವರಿ ವ್ಯವಸ್ಥೆ :**

ಸತತ ನೀರಿನಿಂದ ಆಶ್ರಯ ಕೂಡಿರುವ ಕೆರೆ, ಬಾವಿ, ತೋಟ, ಗದ್ದೆಗಳಲ್ಲಿ ತೆಂಗು ವೀಳ್ಯದೆಲೆ ಅಡಿಕೆಗಳನ್ನು ಬೆಳೆಯಲಾಗುತ್ತಿತ್ತು. ಮಳೆಯನ್ನು ಅವಲಂಬಿಸಿದೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿಯ ಸಂಪನ್ಮೂಲಗಳು ಅತ್ಯವಶ್ಯಕವಾಗಿದ್ದವು. ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆ, ಹಳ್ಳ, ಕೊಳ್ಳ, ಹೊಂಡಗಳನ್ನು ಅವಲಂಬಿಸಿದ್ದು ನಮ್ಮ ಆರ್ಥಿಕ ಪರಿಸ್ಥಿತಿಯ ಸುಧಾರಿಸುತ್ತದೆ. ಇಂತಹ ನದಿ, ಕೆರೆ, ಭಾವಿ, ಹಳ್ಳ ಕೊಳ್ಳಗಳ ಸಾರ್ವಜನಿಕರಿಗೆ ಉಪಯೋಗವಾಗುತ್ತಿದ್ದವು. ಇವುಗಳನ್ನು ನಮ್ಮ ಪೂರ್ವಜರು ಕಟ್ಟಿಸುವುದು ಪುಣ್ಯಕರ ಶ್ರೇಯಸ್ಸು ಎಂದು ಭಾವಿಸಿದ್ದರಿಂದ ಈ ನಾಡಿನ ಉದ್ದಗಲ್ಲಕ್ಕೂ ಅನೇಕ ಕೆರೆ, ಭಾವಿಗಳನ್ನು ನಿರ್ಮಿಸಿ ದಾನ ಬಿಟ್ಟಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ನಮ್ಮ ನಾಡು ತುಂಗಭದ್ರಾ ನದಿಯಿಂದ ಸುತ್ತುವರಿದು ಅದು ಅಲ್ಲಲ್ಲಿ ಉಪನದಿಗಳಾಗಿ ಹಳ್ಳಕೊಳ್ಳಗಳಾಗಿ ಹರಿದು

ನೀರಾವರಿಗೆ ಅನುಕೂಲ ಮಾಡಿಕೊಟ್ಟಿದೆ ಪಲ್ಲವರ ಕಾಲದ ಒಂದು ತಾಮ್ರಪಟ ಪಲ್ಲವರಾಜರಿಗೆ ಕಾಡುಮೆಟ್ಟಿಯರಸ ಎಂದು ಕರೆಯಲಾಗುತ್ತಿತ್ತು. ಹೀಗೆಂದರೆ ಅಡವಿಯನ್ನು ನಿವಾರಿಸಿ ಆ ಭೂಮಿಯನ್ನು ವ್ಯವಸಾಯಕ್ಕೆ ಅಣಿಗೊಳಿಸುವುದೆಂದು ಅರ್ಥ. ಇದು ಅಂದಿನ ಆಳರಸರು ವ್ಯವಸಾಯಕ್ಕೆ ನೀಡಿದ ಮಹತ್ವವನ್ನು ಎತ್ತಿ ತೋರಿಸುತ್ತದೆ. ಅಂದಿನ ಅರಸರು ಸರೋವರಗಳ ನಿರ್ಮಾಣ ನದಿ ಕಾಲುವೆಗಳನ್ನು ಮತ್ತು ವಿವಿಧ ಕಾಲುವೆಗಳನ್ನು ನಿರ್ಮಿಸಿದರು.

ಏಳನೆಯ ಶತಮಾನದಿಂದ ಪಲ್ಲವರ ಆಡಳಿತದಲ್ಲಿ ಕೆರೆ ನೀರಾವರಿ ಯೋಜನೆಗಳು ಜನಪ್ರಿಯವಾಗಿದ್ದಂತೆ ಕಂಡುಬರುತ್ತದೆ. ಏಕೆಂದರೆ ಅಂದಿನ ಅರಸರು ಕೆರೆಗಳನ್ನು ನಿರ್ಮಿಸಿ ಅದಕ್ಕೆ ತಮ್ಮ ಹೆಸರುಗಳನ್ನಿರಿಸಿರುವ ಉದಾಹರಣೆ ದೊರೆತಿವೆ.[೪] ತಿರೈಯನ್ ಕೆರೆ, ವೊರಾಮೇಷನ್ ತಟಾಕ, ಪರಮೇಶ್ವರ ತಟಾಕ ಚಿತ್ರವೇಘ ತಟಾಕ ಮುಂತಾದವು ಉಲ್ಲೇಖವಿದೆ.

ಇದರಂತೆ ಬಾವಿ ನೀರಾವರಿ ಯೋಜನೆಗಳೂ ಜಾರಿಯಲ್ಲಿದ್ದವು. ಒಂದು ಬಾವಿಯ ವಿಷಯವನ್ನು ನಾವು ಕಾಣಬಹುದಾಗಿದೆ. ಅದೆಂದರೆ ಸ್ವಸ್ತಿಕ್ ಆಕಾರದ ಒಂದು ಬಾವಿ ಇದ್ದು ಅದರ ನೀರನ್ನು ಪಡೆಯಲು ೪ ದಿಕ್ಕುಗಳಲ್ಲಿ ಪಾವಟಿಗೆ ರಚಿಸಲಾಗಿತ್ತು. ಶಾಸನದಲ್ಲಿ ಹೇಳಲಾದಂತೆ ಈ ಬಾವಿಯನ್ನು ಕಂಬನ್ - ಅರಿಯನ್ ಎಂಬಾತನು ನಿರ್ಮಿಸಿದ್ದರು.[೫] ಅದಕ್ಕೆ ಮರಪ್ಪಿಡುಗು ಪೆರುನ್ನಣರು ಎಂದು ನಾಮಕರಣ ಮಾಡಿದ್ದರು. ಬಹುಶ ಈ ಬಾವಿಯನ್ನು ದೇವಸ್ಥಾನಕ್ಕೆ ಬಳಕೆ ಮತ್ತು ಅದರ ಹೂದೋಟಕ್ಕೆ ನೀರುಣಿಸಲೆಂದೇ ನಿರ್ಮಿಸಿರಬಹುದು.

ಚೋಳರ ಕಾಲದಲ್ಲಿ ಕಾವೇರಿ ಮುಖಜ ಭೂಮಿಯ ನೀರನ್ನು ಬಳಸುತ್ತಿದ್ದರು. ಈ ನದಿಯ ನೀರಿನಿಂದ ನೀರಾವರಿ ಸೌಲಭ್ಯಗಳನ್ನು ಪಡೆಯುವಂತಾಯಿತು. ಕಾವೇರಿ ನದಿಯ ವಿವಿಧ ಉಪನದಿಗಳ ಹೆಸರು ಚೋಳರ ಕಾಲದವೇ ಆಗಿವೆ. ಆಂಧ್ರಪ್ರದೇಶದ ಗುಂಟೂರಿನಲ್ಲಿ ಕ್ರಿ.ಶ. ೧೧೫೭ಕ್ಕೆ ಸೇರಿರಬಹುದಾದ ಒಂದು ಶಾಸನದಲ್ಲಿ ಕರಿಕಾಲ ಎಂಬುವವನು ಕಾವೇರಿ ನದಿಗೆ ಅಡ್ಡಲಾಗಿ ಒಂದು ಅಣೆಕಟ್ಟನ್ನು ನಿರ್ಮಿಸಿದ ವಿಷಯವನ್ನು ಪ್ರಸ್ತಾಪಿಸಲಾಗಿದೆ.[೬] ಕುಲೋತ್ತುಂಗಚೋಳನು ಬೇಸಾಯಕ್ಕೆ ಬಾರದ ಭೂಮಿಯನ್ನು ಕೆರೆ ನಿರ್ಮಾಣ ಕಾರ್ಯಕ್ಕೆ ಮಾರಾಟ ಮಾಡಿದ ವಿಷಯವನ್ನು ನಾವು ಅರಿಯಬಹುದು. ಅದನ್ನು ಕೊಂಡುಕೊಂಡ ವ್ಯಾಪಾರಿಯು ಗಿಡಗಳನ್ನು ಕಡಿದು ಭೂಮಿಯನ್ನು ಸಮತಟ್ಟಾಗಿ ಮಾಡಿ ಕೆರೆಯನ್ನು ನಿರ್ಮಿಸಿದಂತೆ[೭] ತಿಳಿಸುತ್ತದೆ.

ಕದಂಬ ಮಯೂರಶರ್ಮನ ಚಂದ್ರವಳ್ಳಿಯ ಶಾಸನವನ್ನು ಹೆಸರಿಸಬಹುದಾಗಿದೆ.[೮] ಅರಸು ಮಯೂರಶರ್ಮನಿಂದ ನಿರ್ಮಿಸಲಾದ ಒಂದು ಕೆರೆಯ ಬಗೆಗೆ ಈ ಶಾಸನ ತಿಳಿಸುತ್ತದೆ. ಇಲ್ಲಿ ಹೇಳಲಾದ ಕೆರೆಯನ್ನು ಹುಲಿಗೊಂಡ ಕಣಿವೆಯಲ್ಲಿಯ ಎರಡು ಗುಡ್ಡಗಳಿಂದ ೧೦೦೦ ಅಡಿಗಳ ಅಗಲದ ಆಳವಾದ ಪ್ರದೇಶದಲ್ಲಿ ಕಟ್ಟಲಾಗಿದೆ. ಎರಡು ಗುಡ್ಡಗಳನ್ನು ಒಡ್ಡಿನಿಂದ ಜೋಡಿಸಿ ನೀರನ್ನು ತಡೆಹಿಡಿದು ಸ್ಥಳೀಯ ಹೊಲಗಳಿಗೆ ನೀರನ್ನು ಹರಿಸಲಾಗಿದೆ. ಇದೇ ವಂಶದ ರವಿವರ್ಮನೆಂಬ ಅರಸು ಒಂದು ಕೆರೆಯನ್ನು ನಿರ್ಮಿಸಿದ್ದಾನೆ.[೯]

ಗಂಗ ವಂಶದ ಯರಿಯಪ್ಪ ಪೆರುಮಾಡಿ ತನ್ನ ಸ್ಮರಣೆಗೆ ಪಟ್ಟಾಭಿಷೇಕ ಸ್ಮಾರಕವಾಗಿ ತನ್ನ ಅರಸಿಯಾದ ಚಿಕ್ಕಬ್ಬೆಟಿಗೆ ಬದಿರಿಗಿಡದ ಹಿಂದಿನ ಒಂದು ಕೆರೆಯನ್ನು ನೀಡಿದ. ರಾಣಿ ಚಿಕ್ಕಬ್ಬೆ ಆ ಕೆರೆಯನ್ನು ದೇವಸ್ಥಾನಕ್ಕೆ ದಾನ ನೀಡಿದಳು.[೧೦] ಆನೆಯ ಶತಮಾನಕ್ಕೆ ಸಂಬಂಧಿಸಿದ ಕೋಲಾರ ಜಿಲ್ಲೆಯ ತಾಳಪಲ್ಲಿ ಎಂಬ ಹಟ್ಟಿಯಲ್ಲಿಯ ಶಾಸನ ಒಂದರಲ್ಲಿ ಪಾಲಪಡುವ ಕೆರೆಯ ತೂಬಿನ ಕಾಲುವೆಗೆ ಹತ್ತಿರ ೩೦ ಕೋಲ ಭೂಮಿಯನ್ನು ಗೌಂಡ ಎಂಬುವವನಿಗೆ ಅವನ ಸಾಹಸ ಮರಣಕ್ಕಾಗಿ ನೀಡಿದ್ದನ್ನು ಕಾಣಬಹುದು.[೧೧]

ಚಾಲುಕ್ಯರ ಕಾಲದ ಎರಡನೆಯ ಸೋಮೇಶ್ವರನು ಪಿರಿಯಕೆರೆಗೆ ದಾನ ನೀಡಿದನು.[೧೨] ಕ್ರಿ.ಶ. ೧೦೯೭ರಲ್ಲಿ ಚಾಲುಕ್ಯ ಅರಸನಾದ ೬ನೆಯ ವಿಕ್ರಮಾದಿತ್ಯನ ಸಾಮಂತನಾದ ಹೊಯ್ಸಳ ವಿನಯಾದಿತ್ಯನು ಗಾತಸಪ್ತಸತಿ ಹಳೆಬೀಡು ದ್ವಾರಸಮುದ್ರ ಕೆರೆಗೆ ನೂತನ ಕಾಲುವೆಯೊಂದನ್ನು ನಿರ್ಮಿಸಿದನು.[೧೩]

ಮತ್ತೊಂದು ಶಾಸನವೆಂದರೆ ಕೊಪ್ಪಳ ಜಿಲ್ಲೆಯ ಹೂಲಿಗಿ (ಮುನಿರಾಬಾದ್)ಯಲ್ಲಿ ೬ನೆಯ ವಿಕ್ರಮಾದಿತ್ಯನ ಕಾಲದ್ದು[೧೪] ಈ ಶಾಸನದಲ್ಲಿ ಹುಲಿಗಿಯ ಅಂದುಪುಲಿಗೆ ಮತ್ತು ವ್ಯಾಘ್ರ ಗ್ರಾಮವೆಂದು ಕರೆಯುತ್ತಿದ್ದ ಹಾಗೂ ತುಂಗಭದ್ರೆಯ ಎಡದಂಡೆಯ ಮೇಲಿದ್ದ ನದಿಯ ದಂಡೆಯನ್ನು ವಿವರಗಳನ್ನು ನೀಡುತ್ತದೆ.

ಹೊಯ್ಸಳರ ಕಾಲದಲ್ಲಿ ಹಲವು ಶಾಸನಗಳು ಕೆರೆಗೆ ಸಂಬಂಧಿಸಿವೆ. ಕೆರೆಗೆ ನಿರ್ಮಾಣಕ್ಕೆಂದು ಅರಸಿ ಶಾಂತಲಾದೇವಿ ಅಂದರೆ ಅದೇ ವಿಷ್ಣುವರ್ಧನ ಪತ್ನಿ ದಾನ ನೀಡಿದ್ದಳು.[೧೫] ಮತ್ತೊಂದು ಕೆರೆಯ ಬಗೆಗೆ ಉಲ್ಲೇಖವಿದೆ. ಹಂಪಿಗೆ ಹತ್ತಿರದಲ್ಲಿಯೇ 'ಹಂಪೆಕಟ್ಟೆ' ಎಂಬ ಕೆರೆ ಇತ್ತು. ನಂತರ ಅದು ಕ್ರಿ.ಶ. ೧೧೯೯ರ ಒಂದು ಶಾಸನವು ಈ ಕೆರೆ ಇದ್ದುದನ್ನು ಉಲ್ಲೇಖಿಸಿದೆ. ಅಂದರೆ ಕ್ರಿ.ಶ. ೧೩೩೬ರಲ್ಲಿ ರಾಜಧಾನಿ ನಿರ್ಮಾಣವಾಗುವ ಮುನ್ನವೇ ಹಂಪಿಯ ಬಳಿ ನೀರಾವರಿ ಪ್ರದೇಶಗಳಿದ್ದವು ಎಂಬುದು ಗೊತ್ತಾಗುತ್ತದೆ.[೧೬] ಗಂಗಾವತಿ ತಾಲೂಕಿನಲ್ಲಿ ಅನೇಕ ಕೆರೆಗಳು ವಿಜಯನಗರ ಕಾಲುವೆಗಳು ಕಂಡುಬರುತ್ತವೆ. ವಿಜಯನಗರ ಕಾಲದಲ್ಲಿ ಎರಡನೆಯ ಬುಕ್ಕರಾಯ ನೀರಿನ ಪೂರೈಕೆಗೆಂದೆ ತುರ್ತು ಅಣೆಕಟ್ಟನ್ನು ನಿರ್ಮಿಸಿದ. ಈ ಅಣೆಕಟ್ಟನ್ನು ವಿರೂಪಾಕ್ಷ ದೇವಾಲಯದ ಉತ್ತರ ಭಾಗದಲ್ಲಿ ೧ ಕಿ.ಮೀ. ದೂರದಲ್ಲಿ ನಿರ್ಮಿಸಿದೆ. ಈ ಅಣೆಕಟ್ಟಿನ ಬಲಭಾಗದ ದಂಡೆಯಿಂದ ಹರಿದು ಬರುವ ನೀರು ಅಲ್ಲಿಂದ ನದಿಗುಂಟಾ ಕೆಳಗೆ ಬಂದರೆ ಮೊದಲು ಸಿಗುವ ಮಲ್ಲಾಪೂರ ಅಣೆಕಟ್ಟು, ಈ ಮಲ್ಲಭಾಪುರ ಹಂಪಿಯಿಂದ ೩೦ ಕಿ.ಮೀ. ದೂರದಲ್ಲಿತ್ತು. ಇದನ್ನು ಕೃಷ್ಣದೇವರಾಯನು ನಿರ್ಮಿಸಿದನು. ಕ್ರಿ.ಶ. ೧೫೨೧ರಲ್ಲಿ ನಿರ್ಮಿಸಿದಂತೆ ಅಲ್ಲಿಯ ಶಿಲಾ ಶಾಸನದಿಂದ ತಿಳಿದುಬಂದ ವಿಷಯ ನದಿ ಮಧ್ಯೆ ಇರುವ ಗಡ್ಡೆಗಳವರೆಗೆ ದೊಡ್ಡ ಬಂಡೆಗಳಿಂದ ಅಡ್ಡಲಾಗಿ ಗೋಡೆಯನ್ನು ನಿರ್ಮಿಸಿ ನೀರನ್ನು ತಡೆಗಟ್ಟುವುದು. ನದಿಯ ಆಚೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಓರೆಜಂತಗಲ್ಲೆಂಬಲ್ಲಿ ಅದೇ ಹಳ್ಳಿಯ ಹೆಸರಿನಿಂದ ಅಣೆಕಟ್ಟನ್ನು ನಿರ್ಮಿಸಲಾಗಿದೆ.[೧೭] ನದಿಯ ಎಡದಂಡೆಯ ಮೇಲೆ ಚಿಕ್ಕಜತಂಗಲ್ಲು ಎಂಬಲ್ಲಿ ಒಂದು ಅಣೆಕಟ್ಟನ್ನು ಕಟ್ಟಲಾಗಿದೆ. ಇದನ್ನು ಇಂದಿಗೂ ಸಹ ಜನರು ಬೇಸಾಯವನ್ನು ಉಪಯೋಗಿಸುತ್ತಿದ್ದಾರೆ.[೧೮] ೧೪೬೬ರ ಒಂದು ಶಾಸನವು ಈ ಶಾಸನವು ನದಿಯ ಒಂದು ಶಾಖೆಗೆ ಅಡ್ಡಲಾಗಿ ಕಟ್ಟಿದ ಅಣೆಕಟ್ಟಿನಿಂದ ದೇವರಸನ ಕಾಲುವೆ ನಿರ್ಮಾಣದ ಬಗೆ

ಸೂಚಿಸುತ್ತದೆ. ಎರಡನೆಯ ದೇವರಾಯನ ಮಂತ್ರಿ ನಾಗಣ್ಣ ದಂಡನಾಯಕನ ಆದೇಶದಂತೆ ನಡೆದುಕೊಂಡ ಓರ್ವ ಪ್ರಾಂತಾಧಿಕಾರಿ ಇದಕ್ಕೆ ಸಂಬಂಧಿಸಿದ ಶಾಸನ ಕ್ರಿ.ಶ. ೧೪೨೪ರಂದು ಈ ಆದೇಶದಂತೆ ಪ್ರಾಂತಾಧಿಕಾರಿಯು ಅಣೆಕಟ್ಟುಗಳನ್ನು ದುರಸ್ತಿ ಕಾರ್ಯವನ್ನು ಮಾಡಿ ಅಣೆಕಟ್ಟನ್ನು ಕಟ್ಟಿಸಿ ಬುಕ್ಕರಾಜನಿಗೆ ವಹಿಸಿಕೊಟ್ಟ. ಪ್ರಾಂತಾಧಿಕಾರಿ, ಚಾಮನು ನೀಡಿದ ಸಾಲದ ಹಣದಿಂದ ಈ ಕಾರ್ಯ ಮಾಡಿದ ಎಂದು ಕ್ರಿ.ಶ. ೧೪೨೪ ಶಾಸನ ತಿಳಿಸುತ್ತದೆ.[೧೯]

ವಿಜಯನಗರ ಅರಸನಂತರ ಕನಕಗಿರಿ ಪಾಳೆಗಾರರು ಆಡಳಿತವನ್ನು ನಡೆಸಿದ್ದರು. ಇವರು ಗುಜ್ಜಲವಂಶದವರು. ಇವರು ಕೃಷಿಗೆ ಕೊಡಿಗೆಯನ್ನು ನೀಡಿದ್ದಾರೆ. ಇವರ ಶಾಸನಗಳಲ್ಲಿ ಕೃಷಿಗೆ ಸಂಬಂಧಿಸಿದಂತೆ ಕೆರೆಗೆ ಬಾವಿಗೆ ಭೂದಾನ ನೀಡಿದ ವಿವರ ಶಾಸನಗಳು ಉಲ್ಲೇಖಿಸುತ್ತವೆ. ಕನಕಗಿರಿ ಶಾಸನವೊಂದರಲ್ಲಿ ಗುಜ್ಜಲ ವಂಶದ ಇಮ್ಮಡಿ ವುಡಿಸಿ ನಾಯಕರ ರಾಣಿ ಚಿಂಣಮ್ಮ ಕನಕರಾಯ ಕೆರೆಯನ್ನು ಕಟ್ಟಿಸಿದಳು ಎಂದು ಉಲ್ಲೇಖವಿದೆ.[೨೦] "ಅದೇ ರೀತಿ ಮತ್ತೊಂದು ಬಸ್ರಹಾಳ ಶಾಸನವೊಂದರಲ್ಲಿ ಗುಜ್ಜಲ ವಂಶದ ಇಮ್ಮಡಿ ವುಡಸಿ ನಾಯಕನ ರಾಣಿ ಕನಕಮ್ಮ ಗುಡ್ಡದಲ್ಲಿ ಬಾವಿಯನ್ನು ಕಟ್ಟಿಸಿದ ಉಲ್ಲೇಖವಿದೆ.[೨೧] ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ ತಿಂತಣಿಯ ಗುಜ್ಜಲ ಬೋಮ ನಾಯಕನ ಮಗ ಲಖಮಣ ನಾಯಕ ಮತ್ತು ಬೊಮ್ಮನಾಗತಿ ಕಲ್ಲುಕೆರೆಯನ್ನು ಕಟ್ಟಿಸಿದರು ಎಂದು ಉಲ್ಲೇಖವಿದೆ.[೨೨] ಮತ್ತೊಂದು ಆನೆಗೊಂದಿ ಶಾಸನವೊಂದರಲ್ಲಿ ತುಂಗಭದ್ರಾ ನದಿಯ ತೀರದ ಬಲಭಾಗದ ಬಂಡೆಯಲ್ಲಿ ಹರಿಹರನ ಮಗನಾದ ಕಂಪಭೂಪಾಲನು ತುಂಗಭದ್ರಾ ತೀರದಲ್ಲಿ ಸೊಪಾನ ಮಾಡಿಸಿದ ಎಂದು ಉಲ್ಲೇಖವಿದೆ.[೨೩]

ಹೀಗೆ ಹಳ್ಳಕೊಳ್ಳಗಳಾಗಿ ಹರಿದು ನೀರಾವರಿಗೆ ಅನುಕೂಲ ಮಾಡಿಕೊಟ್ಟಿದೆ. ಇಂತಹ ಹಳ್ಳಕೊಳ್ಳ, ಕೆರೆಗಳಲ್ಲಿ ಗಂಗಾವತಿ ತಾಲೂಕಿನ ಪರಿಸರದ ಕೆರೆಯೂ ಸಹ ಒಂದಾಗಿದೆ. ಇಲ್ಲಿ ಹೆಚ್ಚಿನ ಭೂಮಿ ನೀರಾವರಿ ಗದ್ದೆಯಿಂದ ಕೆರೆಯ ಕೋಡಿಬಿದ್ದ ಮೇಲೆ ಆ ನೀರನ್ನು ಬಳಸಿಕೊಂಡು ಗದ್ದೆ ಮಾಡಿಕೊಂಡಿರುವುದಕ್ಕು ಕೋಡಿಯ ಕೆರೆ ಗದ್ದೆ ಎಂದು ಕರೆದಿರಬಹುದು. ಕೆರೆ ಕೋಡಿ ಬಿದ್ದಾಗ ಸಾಮಾನ್ಯ ಬೆಳೆಗಳನ್ನು ಗದ್ದೆ ಉಳುಮೆ ಮಾಡಿ ಬೆಳೆಯುತ್ತಿದ್ದರು. ರಾಮದುರ್ಗ ಶಾಸನವೊಂದರಲ್ಲಿ ಸಂಗಮಾಪುರದ ಹರಳಿಗದ್ದೆ ಸ್ಥಳ ಬೀಜವರಿ ಖಂಡಕ ೧೦ ಆಯಿದು ಕೊಳಗದ ಮಾನ್ಯ ಮಾಡಿದನು ಎಂದು ಉಲ್ಲೇಖವಿದೆ.[೨೪] ಅಂದರೆ ಭೂಮಿ ಕಪ್ಪು ಕೆರೆಯ ಇಲ್ಲಿ ಕಪ್ಪುಕೆರೆಯ ಎಂದರೆ ಕಪ್ಪು ಭೂಮಿಯ ಕೆರೆ ಎಂದಾಗುತ್ತದೆ. ಇವುಗಳನ್ನು ದೇವರಿಗೆ ಜೋಯಿಸರಿಗೆ ಭಟ್ಟರಿಗೆ, ಬ್ರಾಹ್ಮಣರಿಗೆ ಕೆರೆಯನ್ನು ಗದ್ದೆಯನ್ನು ದಾನ ನೀಡಿದ್ದನು ತಿಳಿಸುತ್ತದೆ. ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ ಸೂಳೆಯಕೆರೆ (ಸೂಳೆಕಲ್‌ಕೆರೆ) "ಶ್ರೀವೀರ ಅಚ್ಯುತ ದೇವರಾಯ ಕರುಮುಡಿಗೆ ಯಲಬುರಿಗೆಯ ಸೀಮೆಗೆ ಸೂಳೆಯಕೆರೆ ದಾನ ನೀಡಿದನು.[೨೫]

ಹೀಗೆ ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೆ ಕೃಷಿಗೆ ಹೆಚ್ಚು ಮಹತ್ವವನ್ನು ಕೊಡುತ್ತಾಬಂದಿದ್ದಾರೆ. ಅದು ೧೦ನೆಯ ಶತಮಾನ ನಂತರ ಕೃಷಿಗೆ ಹೆಚ್ಚಿನ ಮಹತ್ವ ಕೊಡಲಿಕ್ಕೆ ಪ್ರಾರಂಭ ಮಾಡಿದರು.

**ಪ್ರಾಚೀನ ಕಾಲದಿಂದ ವ್ಯಾಪಾರ ಮಾರ್ಗ ಕೇಂದ್ರಗಳು :**

ಶಾತವಾಹನ ಕಾಲದಲ್ಲಿ ವ್ಯಾಪಾರಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದರು. ಅವರ ಕಾಲದಲ್ಲಿ ವ್ಯಾಪಾರ ಪ್ರಖ್ಯಾತಿ ಪಡೆದಿತ್ತು. ಇವರ ಕಾಲದಲ್ಲಿ ಕಲ್ಯಾಣ, ಗೋವಾ, ವೈಜಯಂತಿ, ಹೊನ್ನಾಮ ಇನ್ನು ಮುಂತಾದ ದಖ್ಖಿನ್ ಬಂದರುಗಳು ವಾಣಿಜ್ಯ ಕೇಂದ್ರದ ಬಂದರುಗಳು ಪೊತಾನ, ತಗರ ಹಾಗೂ ನಾಸಿಕ ಪಟ್ಟಣಗಳಿಗೆ ಸಂಪರ್ಕವನ್ನು ಕಲ್ಪಿಸಿದ್ದರು. ದಕ್ಷಿಣದಲ್ಲಿ ನಾಸಿಕ ಹಾಗೂ ವೈಜಂತಿಗಳು ದೇಶೀಯ ವ್ಯಾಪಾರದ ಕೇಂದ್ರಗಳಾಗಿದ್ದವು. ಪ್ರತಿಷ್ಠಾನದಿಂದ ಹೇರಬ, ಮಾರ್ಗ ಕೊಲ್ಲಾಪುರ, ಕೊಪ್ಪಳ, ಮಸ್ಕಿ, ಚಂದ್ರವಳ್ಳಿ, ಕನಕಗಿರಿ ಇನ್ನು ಮೊದಲಾದ ಪಟ್ಟಣಗಳಿಗೆ ಸಂಪರ್ಕವನ್ನು ಕಲ್ಪಿಸಿತ್ತು.

ಚಾಲುಕ್ಯರ ಕಾಲದಲ್ಲಿ ಐಹೊಳೆಯಲ್ಲಿ ೫೦೦ ಜನ ಸದಸ್ಯರ ವರ್ತಕರ ಸಂಘವೆಂದು ವ್ಯಾಪಾರದ ಹುಟ್ಟುಹಾಕಿತು. ಸೆಟ್ಟಿಗಳು ನಾನಾ ದೇಶಗಳು ಗವ, ಮುಮ್ಮರಿ ದಂಡ ಎಂಬ ಹೆಸರು ಉಲ್ಲೇಖವಿದೆ. ಮತ್ತು ಉಪಸಮಿತಿಗಳಾಗಿದ್ದವು. ಐಹೊಳೆಯ ಗೌಡ ಗುಡಿಯ ತೊಲೆಯ ಮೇಲೆ ಚಾಲುಕ್ಯರ ಕಾಲದ ೮ ವ್ಯಾಪಾರಿ ಸಂಘಗಳು ಇದ್ದವು.

ರಾಷ್ಟ್ರಕೂಟರ ಕಾಲದಲ್ಲಿ ಮಾನ್ಯಖೇಟವು ಮಾರಾಟ ಕೇಂದ್ರವಾಗಿತ್ತು. ವ್ಯಾಪಾರಿ ಸಮೂಹವಾದ ವೀರಬಣಜಿಗರು ವ್ಯಾಪಾರಿ ವೃತ್ತಿ ಸಂಘಗಳನ್ನು ಹೊಂದಿದ್ದರು.

**ವ್ಯಾಪಾರ :**

ಕರ್ನಾಟಕ ಶಾಸನಗಳಲ್ಲಿ ವ್ಯಾಪಾರಿಗಳ ಉಲ್ಲೇಖ ಪದೇ ಪದೇ ಬರುತ್ತದೆ. ಹಿಂದಿನಿಂದಲು ದೇಶದ ಆರ್ಥಿಕ ವ್ಯವಸ್ಥೆಯ ನಾಡಿಗಳು ಇವರಿಗಾಗಿ ವಸ್ತುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯುವ, ಅವುಗಳನ್ನು ಬೇಕಾದ ಜನಕ್ಕೆ ಮುಟ್ಟಿಸುವ ಮಧ್ಯವರ್ತಿಗಳು. ಇವರು ತಮ್ಮದೇ ಆದ ಸಂಘಗಳನ್ನು ಸ್ಥಾಪಿಸಿಕೊಂಡು ಅದರ ಮೂಲಕ ತಮ್ಮ ವ್ಯಾಪಾರಿ ಒಗ್ಗಟ್ಟನ್ನು ಪ್ರದರ್ಶಿಸುತ್ತಿದ್ದರು. ಎಲ್ಲಾ ಗುಂಪುಗಳು ಒಂದೆಡೆ ಸಭೆ ಸೇರಿರುತ್ತಿತ್ತು ಅನೇಕ ಶಾಸನಗಳಲ್ಲಿ ಸಭೆಯಲ್ಲಿ ಸೇರಿದ್ದ ವ್ಯಕ್ತಿಗಳ ಉಲ್ಲೇಖವಿದೆ. ವ್ಯಾಪಾರವನ್ನು ವೃತಿಯಾಗಿಸಿಕೊಂಡವರು. ವರ್ತಕರು ಇವರನ್ನು ಅನೇಕ ಪ್ರಕಾರ ಪಂಗಡಗಳಿದ್ದವು. ಬಣಜಿಗ ಸೆಟ್ಟಿ, ಪೆಟ್ಟಿಗತ್ತಿ, ವಡ್ಡವ್ಯವಹಾರಿ, ನಾನಾದೇಶಿ, ಉಭಯ ನಾನಾದೇಶಿ, ಸಾಸ್ವಿರ್ವರು, ತಂಬುಲಿಗರು, ಅಯ್ಯವೊಳೆ ೫೦೦ ಹೀಗೆ ಮೊದಲಾದವನ್ನು ಹೆಸರಿಸಬಹುದು.

ವರ್ತಕರ ಗುಣಗಾನ ಬಗ್ಗೆ ಯಲಬುರ್ಗಾ ತಾಲೂಕಿನ ಮುಧೋಳ ಶಾಸನವೊಂದರಲ್ಲಿ ಉಲ್ಲೇಖವಿದೆ.[೨] ತ್ರೈಲೋಕಮಲ್ಲನು ಕಲ್ಯಾಣದಲ್ಲಿ ಆಳುತ್ತಿರುವಾಗ ಇವನ ಅನುಮತಿ ಪಡೆದು ೫೦೦ ಜನ ವ್ಯಾಪಾರಿಗಳು ಗವಿಸಿದ್ದೇಶ್ವರ ದೇವಾಲಯವನ್ನು ನಿರ್ಮಿಸಿದರು. ಈ ವ್ಯಾಪಾರಿಗಳನ್ನು ನಾನಾ ರೀತಿಯಲ್ಲಿ ಶಾಸನ ವರ್ಣಿಸಿದೆ. ಇವರು ಬಲದಲ್ಲಿ ಬಲಿಯಂತೆ, ಚಲದಲ್ಲಿ ದುರ್ಯೋಧನಂತೆ, ಸತ್ಯದಲ್ಲಿ ಧರ್ಮರಾಯ, ಸಾಹಸದಲ್ಲಿ ಭೀಮರಾಯ ಜ್ಞಾನದಲ್ಲಿ ಸಹದೇವ ಶೌರ್ಯದಲ್ಲಿ ಭೀಷ್ಮ, ತೇಜದಲ್ಲಿ ಆದಿತ್ಯ, ಭೋಗದಲ್ಲಿ ಇಂದ್ರ ತ್ಯಾಗದಲ್ಲಿ ಕರ್ಣನಂತೆ ಗಟ್ಟಿತನದಲ್ಲಿ ಯಮನಂತೆ ಅಭಯ ಗುಣಗಳನ್ನು ಇವರು ಹೊಂದಿದ್ದರು.

ಇಂತಹ ಅಯ್ಯವೊಳೆ ಐನೂರ್ವರು ೮ ನಾಡು ೧೬ ಸಮಸ್ತ ಮುಮ್ಮುರಿದಂಡಗಳು, ನಾನಾ ದೇಶಗಳ ಸೇರಿ ಮಹಾನಾಡಾಗಿದ್ದು ಮುಧವೊಳು ಅಗ್ರಹಾರದ ಗವಿಸಿದ್ಧೇಶ್ವರ ಅಂಗಭೋಗ ಮಾಟಕೋಟದ ಜೀರ್ಣೋದ್ಧಾರ ಸುಣ್ಣ ಬಳಿಯಲು ಗಂಧ, ಕುಂಕುಮ, ಕರ್ಪೂರ ಮುಂತಾದ ನಡೆಯುವಂತಾಗಲು ದೇವರಿಗೆ ದಾನ ನೀಡುತ್ತಾರೆ. ತಾವು ಅಳೆಯುವ ತೊಗುವ ಎಣಿಸುವ ಸಮಸ್ತ ದಾನ್ಯವನ್ನು ಮಾರಿದಲ್ಲಿ ಚಿನ್ನದ ಕಾಣಿ ಎರಡು ಸೀರೆಯ ದಿಂಡಿನ ಬಂಡಿಯೊಂದಕ್ಕು ಒಂದು ಪಣ ಎತ್ತಿನ ಮೇಲಿನ ಮಳವಿಗೆ ಐದು ವೀಸ ತಲೆಯ ಮೇಲಿನ ತರುವ ಜವಳಿಯ ಸೆರೆಗೆ ಒಂದು ವೀಸವನ್ನು ದೇವರಿಗೆ ನೀಡುತ್ತಾರೆ. ಅಲ್ಲದೆ ವೊಕ್ಕಲಗಳ ಒಂದು ಹಾಗವನ್ನು ಹಾಗಲಕೆರೆ ೩೦೦ ಜನರು ಎರಡು ಮನೆಗಳನ್ನು ಬಿಡುತ್ತಾರೆ. ಅಲ್ಲದೆ ಊರ ಜನರು ವೈಯಿಕ್ತಿಕವಾಗಿ ಭೂದಾನ ನೀಡುತ್ತಾರೆ.

ಪುರದ ಶಾಸನದಲ್ಲಿ ೪೮ ಮನೆಯಲ್ಲಿ ಅನೇಕರ ಹೆಸರುಗಳನ್ನು ಮತ್ತು ಊರುಗಳನ್ನು ನೀಡಲಾಗಿದೆ. ವೀರಹಂಪರಸ ಕಂಪಿಲ ಹಂಪದೇವ, ಜೋಯಿಹರಸ, ಕಣ್ಣರಸ ಹಂಪ, ಗೋಯಿಯದು ಪಸ, ಸೆಳಯಜ್ಜರಸ ಹಂಪರಸ, ಹರಿಹರ, ಹಿಂಡಿಯ ಬೀಮರಸ, ಉಮಕನೂರ, ಬಾಚರಸ, ನೆರೆಗಲ್ಲಿ ವಿರುಪರಸ ಹುಡೂರ ಡೋಣಮರಸ, ಅಣ್ಣಲದೇವ, ಮನ್ನ ವುಡಿಯ ಬಾಚರಸ ಮುಂತಾದವರು ಕೇಶವ ನಾಡಸೆಟ್ಟಿರಾಗಿದ್ದಾರೆಂದು ತಿಳಿಸುತ್ತದೆ.[೨೭] ಹನುಮನಾಳ ಶಾಸನವು ಅವರ ಪರಂಪರಿಕ ಹೊಗಳಿಕೆಯನ್ನು ನೀಡಿದ್ದು ಅದರೊಂದಿಗೆ ವ್ಯಾಪರಿ ೮ ನಾಡು ಪರಿನವರು. ಹೆಸರಿಸಿದೆ.[೨೮]

ಗಂಗಾವತಿ ತಾಲೂಕಿನ ಹಿರೆಜಂತಕಲ್ ಶಾಸನವೊಂದರಲ್ಲಿ[೨೯] ಸೇನಭೋವ, ನರಸಯ್ಯ, ನಾಗಿಸೆಟ್ಟಿ ಹನಿಸೆಟ್ಟಿ, ಮೋದವರ ಹೆಸರನ್ನು ಉಲ್ಲೇಖಿಸಿದೆ. ಮತ್ತೊಂದು ಆನೆಗೊಂದಿ ಶಾಸನವೊಂದರಲ್ಲಿ ಲಖ್ಖಿಸೆಟಿ, ಗೋಪಿಶೆಟ್ಟಿ ಎಂದು ಉಲ್ಲೇಖವಿದೆ.[೩೦] ಅದೇ ಗ್ರಾಮದ ಮತ್ತೊಂದು ಶಾಸನದಲ್ಲಿ ಹೊನ್ನಾಹಟ್ಟಿ ಸಮಿತಿ ಮಗಳು ಸೊಯಿಸೆಟ್ಟಿ ಎಂದು ಉಲ್ಲೇಖವಿದೆ.[೩೧] ಅದೇ ಗ್ರಾಮದ ಮತ್ತೊಂದು ಶಾಸನದಲ್ಲಿ ಹೊಂಗದ ಗೊವಿಸೆಟ್ಟೆ ತಳದ ಗಾತ್ರದ ಸೆಟ್ಟಿಗಳು ಎಂದು ಉಲ್ಲೇಖಿಸುತ್ತದೆ.[೩೨]

**ವಡ್ಡ ವ್ಯವಹಾರಿ :**

ಪ್ರಾಚೀನ ಮಧ್ಯಕಾಲೀನ ವರ್ತಕರು ಪ್ರಕಾರಗಳಲ್ಲಿ ವಡ್ಡವ್ಯವಹಾರಿಯೂ ಪ್ರಮುಖವಾಗಿದೆ. ಹಿರಿಯ ವ್ಯಾಪಾರಿ ಎಂಬಥದಲ್ಲಿ ಇವರನ್ನು ಗುರುತಿಸಲಾಗಿದೆ. ವಡ್ಡ ವ್ಯವಹಾರಿ ಎಂದರೆ ಅರಸನಿಂದ ನಿಯಮಿತಗೊಂಡವರು, ಬೆಲೆ ಬಾಳುವ ವಸ್ತುಗಳು ಸಗಟು ವ್ಯಾಪಾರ ಕೈಗೊಳ್ಳುವರು ಎಂದರ್ಥ ಕೊಡಲಾಗಿದೆ. ಈ ವ್ಯಾಪಾರಿಗಳು ವಂಶಪರಂಪರೆಯಾಗಿ ಬಂದವರು. ಈ ವ್ಯಾಪಾರಿಗಳು ಬಹುಶಃ ಚಿನ್ನದ ವ್ಯಾಪಾರಿವನ್ನು ಅವಲಂಬಿಸಿರುವುದು. ಇಲ್ಲಿ ವಂಶಾವಳಿ ವಡ್ಡ ವ್ಯವಹಾರಿ ಪುನ್ಮಖ್ಯಸೆಟ್ಟಿಯ ದೇವರಿಗೆ ನಂದಾದೇವಿಗೆ ದಾನ ನೀಡುತ್ತಿದ್ದಾನೆ. ಇವರು ತಮಗೆ ಬಂದ ಲಾಭದಲ್ಲಿ ದೇವರಿಗೆ ದಾನ ನೀಡುತ್ತಿದ್ದರೆಂದು ಕಂಡುಬರುತ್ತದೆ. ಅಂದರೆ ಯಾವುದೇ ಗ್ರಾಮದಲ್ಲಿ ಏನಾದರು ಪ್ರಮುಖವಾದ ಕಾರ್ಯಗಳು ಜರುಗಬೇಕಾದರೆ ಇವರ ಸಹಾಯ ಸಹಕಾರ ಬೇಕಾಗುತ್ತದೆ. ಈಗಲೂ ಸಹ ಹಟ್ಟಿಯಲ್ಲಿ ಅಣ್ಣಾಗಾರ, ಬಣಗಾರ ಸೆಟ್ಟಿ, ತಳವಾರ ಗೌಡ, ಶ್ಯಾನಭೋಗರು ಇರುವುದನ್ನು ಊರಿನ ದೈವಸ್ಥರು ಎಂದು ಕರೆಯಲಾಗಿದೆ.

ತಂಬುಲಿಗರು ಸಾಸಿರ್ವರು :

ಹಿಂದೆ ತಿಳಿಸಿದ ಹಾಗೆ ತಂಬುಲಿಗ ಸಾಸಿರ್ವರು ಎಲೆಯ ವ್ಯಾಪಾರಕ್ಕೆ ಪ್ರಸಿದ್ಧರಾದವರು. ಇವರು ಮೂಲತಃ ಸಾವಿರ ಜನ ತಂಬುಗರಾಗಿದ್ದರು. ಯಾವುದೊ ಒಂದು ಕಾಲದಲ್ಲಿ ಕಟ್ಟಿದ ಈ ಸಂಘ ಸಂಸ್ಥೆಗಳಲ್ಲಿ ಸದಾಳಾಯ ಸಂಖ್ಯೆಯಲ್ಲಿ ಏರಿಳಿತವಾಗುತ್ತಿತ್ತು. ಇವರನ್ನು ಕೆಲವು ಸಂಪ್ರದಾಯ ಮನೆತನಗಳಿಂದ ಗುರುತಿಸಬಹುದು. ವಿಪ್ರ ಶಾಸನವೊಂದರಲ್ಲಿ ವಿಪ್ರನಾರಾಯಣ ಶಿವದೇವಾಲಯಕ್ಕು ತೆರಿಗೆ ನೂರು ಎಲೆಯನ್ನು ಅಂದಳಕ್ಕೆ ೫೦ ಎಲೆಯನ್ನು ಬಿಟ್ಟು ದಾನ ನೀಡಿದೆ.[೬೬] ಮತ್ತೊಂದು ಆನೆಗೊಂದಿ ಶಾಸನವೊಂದರಲ್ಲಿ ದೇವದೇವತೆಗಳಿಗೆ ಮದುವೆಗೆ ಸಹಾಯ ಮಾಡಿದವರು 'ಸಾತಿಸಾಸಿರ್ವರು' ಅಯ್ಯಮಂತರು ಎಂದು ಹೆಸರು ಇದೆ.[೬೭]



ನಾಣ್ಯಗಳು :

ನಾಣ್ಯಗಳು ಎಲ್ಲರಿಗೂ ಬೇಕಾದ ಹಾಗೂ ಪ್ರಿಯವಾದ ವಸ್ತುಗಳು ಅವು ಸರ್ವವ್ಯಾಪಿಯಾದವು. ಪ್ರಪಂಚದ ಯಾವ ಮೂಲೆಗೆ ಹೊಂದರು. ಅಲ್ಲಿ ಅವರದೇ ಆದ ನಾಣ್ಯಗಳಿರುತ್ತವೆ. ನಾಣ್ಯಗಳಿಲ್ಲದೆ ಇರುವ ಪ್ರಪಂಚವನ್ನು ಊಹಿಸುವುದು ಕಷ್ಟವೆನಿಸುತ್ತವೆ. ಆದರೆ ಸಾವಿರಾರು ವರ್ಷಗಳ ಹಿಂದೆ ನಾಣ್ಯಗಳನ್ನು ಕಂಡುಹಿಡಿಯುವುದಕ್ಕೆ ವಸ್ತುವಿನಿಮಯದ ಮೂಲಕ ವ್ಯಾಪಾರ ವ್ಯವಹಾರ ನಡೆಸುತ್ತಿತ್ತು.

ನಾಣ್ಯ ಎನ್ನುವ ಪದ ಕನ್ನಡ ಮತ್ತು ಇತರೆ ಭಾಷೆಗಳಲ್ಲಿ ಆಡಳಿತದ ಮುದ್ರೆವೊತ್ತಿ ತಯಾರಿಸಿದ ಚಿನ್ನ, ಬೆಳ್ಳಿ, ತಾಮ್ರ ಮುಂತಾದ ಲೋಹದ ಬಿಲ್ಲೆ ಎನ್ನುವ ಅರ್ಥದಲ್ಲಿ ಬಳಕೆಯಾಗಿರುವುದು ಗೊತ್ತಾಗುತ್ತದೆ. ಋಗ್ವೇದ ಕಾಲದಲ್ಲಿ ನಿಷ್ಕ ಎಂಬ ನಾಣ್ಯದ ಬಳಕೆ ಇದ್ದಿತೆಂದು ಸ್ಪಷ್ಟವಾಗುತ್ತದೆ. ನಂತರ ಉತ್ತರ ವೈದಿಕ ಕಾಲದಲ್ಲಿ ನಿಷ್ಕ ಬಳಕೆ ಹೆಚ್ಚಾಗಿ ಕಾಣಬರುತ್ತದೆ. ಬೌದ್ಧ ಜಾತಕ, ತ್ರಿವೇಕಗಳು ಮತ್ತು ಪಾಣಿನಿಯ ಅಷ್ಟಾಧ್ಯಾಯ ಎಂಬ ವ್ಯಾಕರಣ ಗ್ರಂಥಗಳು ಚಿನ್ನದ ನಾಣ್ಯದ ಬಗ್ಗೆ ಉಲ್ಲೇಖವಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಚಿನ್ನ, ಬೆಳ್ಳಿ, ತಾಮ್ರ ನಾಣ್ಯಗಳ ಉಲ್ಲೇಖವಿದೆ. ಬೆಳ್ಳಿನಾಣ್ಯದಲ್ಲಿ ಪಣ, ಅರ್ಧಪಣ, ಪಾದಪಣ ಮತ್ತು ಅಷ್ಟಭಾಗ ಎಂಬ ನಾಲ್ಕು ಮೌಲ್ಯದ ನಾಣ್ಯಗಳನ್ನು ಟಂಕಿಸುತ್ತಿದ್ದರು. ಮೌರ್ಯರ ಕಾಲದಲ್ಲಿ ಪಂಚ್‌ಮಾರ್ಕ್ ಎಂಬ ಚಿನ್ನದ ನಾಣ್ಯಗಳು ಬಳಕೆಯಲ್ಲಿದ್ದವು. ನಂತರ ಇವರು ಸೀಸದಿಂದ ತಯಾರು ಮಾಡಿದ ತುಂಬ ತೂಕ ನಾಣ್ಯ ತಯಾರಿಸಿದರು. ಶಾತವಾಹನರ ಕಾಲದಲ್ಲಿ ಬೆಳ್ಳಿ, ತಾಮ್ರ ಸೀಸ ಮತ್ತು ಪೊಟೀನ (ಮಿಶ್ರಲೋಹದ) ನಾಣ್ಯಗಳನ್ನು ಟಂಕಿಸುತ್ತಿದ್ದರು. ಕಂದ ಕಾಲದಲ್ಲಿ ಪದ್ಮಂಕ ಎಂಬ ನಮೂನೆಯ ಚಿನ್ನದ ನಾಣ್ಯಗಳನ್ನು ಚಲಾವಣೆಗೆ ತಂದರು. ಗಂಗರ ಕಾಲದಲ್ಲಿ ನಿಷ್ಕ ಎಂಬ ಬಲು ಹೆಚ್ಚಿನ ಮೌಲ್ಯದ ಚಿನ್ನದ ಸಾಣ್ಯ ಎಂಬುದು ತಿಳಿದುಬಂದಿದೆ. ಆದರೆ ಅದರ ಸ್ವರೂಪ ತಿಳಿದಿಲ್ಲ. ಬಹುಶಃ ಗದ್ಯಾಣವನ್ನು ಆ ಹೆಸರಿನಿಂದಲೇ ಕರೆಯುತ್ತಿದ್ದಿರಬೇಕು. ಸತ್ಯ ವಾಕ್ಯ ಪೆರ್ಮಾನಡಿಯ ಕ್ರಿ.ಶ. ೯೧೯ ಕೃಷ್ಣಪುರ ಶಾಸನದಲ್ಲಿ ಗದ್ಯಾಗಣ ಪ್ರಸ್ತಾಪ ಕಾಣಬರುತ್ತದೆ. ಇಮ್ಮಡಿ ಮಾರಸಿಂಹನ ಕುಕನೂರು ಶಾಸನದಲ್ಲಿ ದೀನಾರ ಎಂಬ ನಾಣ್ಯದ ಉಲ್ಲೇಖ ಬರುತ್ತದೆ.

೧ ಗದ್ಯಾಣ ೧೦ ಪಣ ೬೦ ಗ್ರನ

೧ ಪಣ ೪ ಹಾಗ ೬ ಗ್ರನ

೧ ಹಾಗ ೧.೫ ಗ್ರನ

ಚಾಲುಕ್ಯರ ಕಾಲದಲ್ಲಿ ವರಾಹ ಚಿನ್ನದ ನಾಣ್ಯಗಳ ಮೇಲೆ ವರಾಹವನ್ನು ಟಂಕಿಸಿದರು. ಚಿನ್ನದ ನಾಣ್ಯಕ್ಕೆ ಪರ್ಯಾಯ ಪದವಾಗಿ ಗದ್ಯಾಣ ಎಂಬ ಪದವಿದ್ದು, ನಾಣ್ಯದ ಇತಿಹಾಸದಲ್ಲಿ ಈ ಪದ ಉಳಿದುಕೊಂಡುಬಂದಿತು. ಚಾಲುಕ್ಯರ ಶಾಸನಗಳನ್ನು ಗಮನಿಸಿದರೆ ಆ ಕಾಲದಲ್ಲಿ ಗದ್ಯಾನಾ (ವರಹ) ಸುವರ್ಣ, ಐರಣ, ಪೊನ್ ಪಣ ಅಥವಾ ಹಣ, ಪೆಲ, ವೀಸ ಹಾಗೂ ರೂಪಕ ಎಂಬ ವಿವಿಧ ನಾಣ್ಯಗಳ ಹೆಸರುಗಳು ಬರುತ್ತವೆ. ರಾಷ್ಟ್ರಕೂಟರ ಕಾಲದಲ್ಲಿ ನಾಣ್ಯಗಳೆಂದರೆ. ದ್ರಮ್ಮ ಸುವರ್ಣ, ಗದ್ಯಾಣ, ಕಳಂಚೂ ಕಾಸು, ಮಂಜಡಿ ಮತ್ತು ಅಕ್ಕಂಗಳು. ಸಾಮಾನ್ಯ ಚಿನ್ನದ ನಾಣ್ಯ ಎಂಬುದಕ್ಕೆ ದ್ರಮ್ಮ ಎಂಬ ಪದವನ್ನು ಉಪಯೋಗಿಸುತ್ತಿದ್ದರು.

ಹೊಯ್ಸಳರ ಕಾಲದಲ್ಲಿ ನಿಷ್ಕ, ಗದ್ಯಾಣ, ವರಹ, ಹೊನ್ ಮತ್ತು ಪೊನ್, ತಾರ, ಪಣ ಮತ್ತು ಹಾಗ, ಎಂಬ ನಾಣ್ಯಗಳ ಉಲ್ಲೇಖ ಕಾಣುತ್ತದೆ.

ಹೀಗೆ ಬೇರೆ ಬೇರೆ ಕಾಲಕ್ಕೆ ಸಂಬಂಧಿಸಿದ ನಾಣ್ಯಗಳನ್ನು ಚಲಾವಣೆಗೆ ತಂದರು. ನಾಣ್ಯಗಳನ್ನು ಟಂಕಶಾಲೆ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಇವುಗಳ ಮುದ್ರಣಕ್ಕೆ ಸಹ ಟಂಕಶಾಲೆ ಎಂದು ಕರೆಯುತ್ತಿದ್ದರು. ಆದರೆ ಬಹು ಹಿಂದಿನ ಕಾಲದಲ್ಲಿ ನಾಣ್ಯಗಳನ್ನು ಆ ಹೆಸರುಗಳಿಂದ ಕರೆಯುತ್ತಿದ್ದರು. ಇಲ್ಲಿ ದಮ್ಮಡಿ, ಒಂದು, ದುಡ್ಡು, ಕೈಗೆದ, ಗೆದ್ಯ, ಮಣ, ಪಾವು, ಸೇರು ಹೀಗೆ ಮುಂತಾದ ಹೆಸರುಗಳಿಂದ ನಾಣ್ಯಗಳ ಚಲಾವಣೆ ಇತ್ತು. ನಂತರ ಆಯಾ ಕಾಲಕ್ಕೆ ಹೆಸರುಗಳಲ್ಲಿ ಬದಲಾವಣೆಯಾಗುತ್ತ ಬಂದಿತ್ತು. ಆನೆಗೊಂದಿ ಶಾಸನವೊಂದರಲ್ಲಿ ಕ್ರಿ.ಶ. ೧೨.೩.೧೫೫೬ರ ೨ ಕಾಸು ಚಿಕ್ಕ ಹರಗೋಲುವೊಂದರಕ್ಕೆ ೧ ಕಾಸು ಎಂದು ಉಲ್ಲೇಖವಿದೆ. ಸಾಣಪೂರ ಶಾಸನವೊಂದರಲ್ಲಿ ಸಿದ್ದದೇವರ ಪೂಜೆಗಾಗಿ ನರಸನಾಯಕನು ೬ ವರಹ ದಾನ ಮಾಡಿದನ್ನು ಶಾಸನದಲ್ಲಿ ಉಲ್ಲೇಖಿಸಿದೆ.[೬೪]

ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳಲ್ಲಿ ಕಮ್ಮಟ[೬೫]ಗಳೆಂದು ಅಂಚಿನ ಟಂಕಶಾಲೆ[೬೬]ಗಳೆಂದು ಕರೆಯುತ್ತಿದ್ದರು. ವಿಶ್ವಕರ್ಮರೆಂದು ಕರೆದುಕೊಳ್ಳುವ ಅಕ್ಕಸಾಲಿಗರನ್ನು ರಾಜನು ಕಮ್ಮಟಗಳಲ್ಲಿ ನೇಮಿಸಿಕೊಳ್ಳುತ್ತಿದ್ದನು.[೬೭] ಈ ಅಕ್ಕಸಾಲಿಗರು ಅಥವಾ ಕಮ್ಮಟದೋಜುರು ತಾವೇ ಪ್ರತ್ಯೇಕವಾಗಿ ಶ್ರೇಣಿಗಳನ್ನು ಸ್ಥಾಪಿಸಿಕೊಂಡಿದ್ದರು. ಉದಾಹರಣೆಗೆ, ಅಂತಹ ಶ್ರೇಣಿಯೊಂದು ಕಮ್ಮಟೇಶ್ವರ ದೇವಸ್ಥಾನಕ್ಕೆ ಆಯಾ ಕಮ್ಮಟಗಳಲ್ಲಿ ಕೊಡಬೇಕಾದ ಭಾಗವನ್ನು ನಿರ್ಧರಿಸಿದ ವಿಷಯವು ಶಾಸನದಲ್ಲಿದೆ.[೬೮] ಪ್ರಾಚೀನ ಕರ್ನಾಟಕವನ್ನು ನೋಡಿದರೆ ಕುಡುತಿನಿ, ಲೊಕ್ಕಿಗುಂಡಿ[೬೯] ಸೂಡಿ,[೭೦] ದೊರಸಮುದ್ರ[೭೧] ಮುಂತಾದ ಕಡೆಗಳಲ್ಲಿದ್ದ ಕಮ್ಮಟಗಳು ಪ್ರಸಿದ್ಧವಾಗಿದ್ದವು. ರಾಜನು ತನ್ನ ಕಮ್ಮಟಗಳ ಮೇಲ್ವಿಚಾರಣೆಗೆ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ಕುಡುತಿನಿಯಲ್ಲಿ ಕುಮಾರಸ್ವಾಮಿ[೭೨] ದೇವಸ್ಥಾನವಿದ್ದಿತ್ತು. ಆ ದೇವಸ್ಥಾನದ ಆಶ್ರಯದಲ್ಲಿದ್ದ ಅಕ್ಕಸಾಲಿಗರು ಕುಮಾರಸ್ವಾಮಿಯ ವಾಹನವಾದ ನವಿಲಿನ ಮುದ್ರಣವುಳ್ಳ ನಾಣ್ಯಗಳನ್ನು ಟಂಕಿಸುತ್ತಿದ್ದನು. ಈ ನವಿಲಿನ ಪೊನ್ನಗಳು ತೂಕದಲ್ಲಿ ಲೊಕ್ಕಿಗುಂಡಿಯ ಚಿನ್ನದ ನಾಣ್ಯಗಳಿಗೆ ಸಮವಾಗಿರಬೇಕಾಗಿದ್ದಿತು.

ಶಾಸನದ[೪೩] ರೀತಿಯನ್ನು ನೋಡಿದರೆ ಕಮ್ಮಟದ ಅಕ್ಕಸಾಲಿಗರಿಗೆ ನಾಣ್ಯಗಳನ್ನು ಟಂಕಿಸುವ ಅಧಿಕಾರವನ್ನು ದೇವಸ್ಥಾನವು ಬಿಟ್ಟುಕೊಟ್ಟು ಅದಕ್ಕೆ ಪ್ರತಿಯಾಗಿ ಅವರಿಂದ ವರ್ಷಕ್ಕೆ ಹನ್ನೆರಡು ಗದ್ಯಾಣ (ಪೊನ್)ಗಳನ್ನು ಪಡೆಯುತ್ತಿದ್ದಿತೆಂಬ ಕಾಣುತ್ತವೆ. ವಿಪ್ರ ಶಾಸನವೊಂದರಲ್ಲಿ ಚಾಲುಕ್ಯ ತ್ರೈಲೋಕ್ಯ ಮಲ್ಲನು (ಒಂದನೆಯ ಸೋಮೇಶ್ವರ) ವಿಪ್ರದ ಶಿವ ದೇವಾಲಯಕ್ಕೆ "ತೋಟದೊಳಗೆ ಗದ್ಯಾಣದಯ್ದು ಆನ..ಪೂರ್ವ್ವಕಂ ಸನ್ಮಾನದಿನಂ ಚಳೇಶ್ವರಂಗೆ ಚಕ್ರೇಶ್ವರನಿಶಾನಂ" ಎಂದು ಉಲ್ಲೇಖವಿದೆ.[೪೪]

ನಾಣ್ಯಗಳಲ್ಲಿ ಪ್ರಸಿದ್ಧವಾದದ್ದು ಗದ್ಯಾಣ[೪೫] ಪೊನ್ ಎಂಬ ಹೆಸರಿನ ನಾಣ್ಯ. ಇದರ ತೂಕ ಸುಮಾರು ೬೩ ಗ್ರಾಂ ಎಂದು ಡಾ.ಅಲ್ಟೇಕರರೂ,[೪೬] ಸುಮಾರು ೬೩ ಗ್ರಾಂ ಎಂದು ಡಾ.ಅಪ್ಪಾದೊರೈ ಅವರು[೪೭] ಅಭಿಪ್ರಾಯಪಡುತ್ತಾರೆ. ಗದ್ಯಾಣಕ್ಕೂ ಉಳಿದ ನಾಣ್ಯಗಳಿಗೂ ಇರುವ ಸಂಬಂಧವನ್ನು ಕೆಳಗೆ ತೋರಿಸಿದೆ.

೧ ಗದ್ಯಾಣ ಹತ್ತು ಪಣ ಅಥವಾ ಹಣ[೪೮]

೧ ಪಣ ಎರಡು ಅಡ್ಡ (ಸಂ ಅರ್ಧ ಪಾರಿ ಅಡ್ಡ)[೪೯]

೧ ಪಣ ನಾಲ್ಕು ಹಾಗ[೫೦] (ಮುಪ್ಪಾಗ ೩.೪ ಪಣ)

೧ ಪಣ ಹದಿನಾರು ವೀಸ (ಅಥವಾ ೨೦ ವೀಸ)[೫೧]

೧ ಹಾಗ ಎರಡು ಬೆಳೆ

ಗದ್ಯಾಣ, ಪಣ, ಅಡ್ಡ, ಹಾಗ, ಬೆಳೆ, ವೀಸ ಇವೆಲ್ಲವು ಪ್ರತ್ಯೇಕ ನಾಣ್ಯಗಳೆಂದು ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

**ಭೂಮಾಪನ ಉದ್ದಳತೆ ಅಳತೆಗಳು :**

ರಾಜಾಧಿರಾಜನು ತನ್ನ ವ್ಯವಹಾರ ಗಣಿತದಲ್ಲಿ ಹೊಲಗಳನ್ನಳೆಯಲು ಗೆಳ (ಕೋಲು)ಗಳನ್ನು ಬಳಸುತ್ತಿದ್ದರೆಂದು ತಿಳಿದುಬರುತ್ತದೆ. ಅವುಗಳನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಅಳತೆಯ ಭೂಮಾಪನಗಳು ಪ್ರಚಲಿತದಲ್ಲಿದ್ದವು. ಹೊಲಗಳನ್ನು ಎರಡು ರೀತಿಗಳಲ್ಲಿ ಅಳೆಯುತ್ತಿದ್ದರು. ಒಂದು ಅದರಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ ಹಿರೇಜಂತಗಲ್ ಶಾಸನವೊಂದರಲ್ಲಿ ಸದಾಶಿವರಾಯನ ಮಗ ತಿರುಮಲ ವೆಂಕಟಾದ್ರಿ ರಾಜನ ಕಾರ್ಯಕರ್ತನಾದ ಚಂದ್ರಗಿರಿಯ ದೇವರಸಯ್ಯನವರು ದೇವಾಲಯಕ್ಕೆ ದೇವಾಲಯದ ಅರ್ಚಕರಿಗೆ ಇಂತಿಷ್ಟು ಅಳತೆಯ ಮೂಲಕ ಖಂಡಕ ಗದ್ದೆಯನ್ನು ಬೀಜಗಳನ್ನು ದಾನ ನೀಡಿದ ಉಲ್ಲೇಖವಿದೆ.[೫೨]

ಈ ರೀತಿಯಲ್ಲದೆ ಮತ್ತೊಂದು ರೀತಿಯ ಅಳತೆಯ ವಿಧಾನವು ಇದ್ದಿತ್ತು. ಆನೆಗೊಂದಿ ಶಾಸನವೊಂದರಲ್ಲಿ ಗದೆಯ ಮೂಗುಳ (೩ ಕೊಳಗ) ಚೊಳಕ್ಕೆಯ್ಯನು ಗೊಳಗ ಸಹಿತವಾಗಿ ದಾನ ನೀಡಿದ ಎಂದು ಉಲ್ಲೇಖವಿದೆ.[೫೩] ಈ ರೀತಿಯಲ್ಲದೆ ಮತ್ತೊಂದು ರೀತಿಯ ಅಳತೆಯ ವಿಧಾನವು ಇದ್ದಿತು. ಚಿಕ್ಕರಾಮಾಪುರ ಶಾಸನವೊಂದರಲ್ಲಿ ಕಪಿಲೇಶ್ವರ ದೇವಾಲಯಕ್ಕೆ ೧೫ ಕೊಳಗ ಗದ್ದೆ ಮಾನ್ಯವನ್ನು ದಾನ ನೀಡಿದ ಎಂದು ಉಲ್ಲೇಖವಿದೆ.[೫೪] ಈ ರೀತಿಯ ಅಳತೆಯ ವಿಧಾನವು ಇದ್ದಿತ್ತು. ಈ ಅಳತೆಗಳು

ಬಹುಮಟ್ಟಿಗೆ ಆ ಕಾಲದ ಆಚರಣೆಯನ್ನು ಪ್ರತಿಬಿಂಬಿಸುವುದೆಂಬುದು ಮುಂದೆ ಸ್ಪಷ್ಟವಾಗುತ್ತದೆ. ದೇಶದ ಆಯಾ ಭಾಗಗಳಿಗೆ. ಆಯಾ ಊರುಗಳಿಗೆ ರಾಜನು ಅಳತೆ ಗೋಲುಗಳನ್ನು ನಿರ್ಧರಿಸುತ್ತಿದ್ದನು.

**ತೆರಿಗೆಗಳು :**

ದೇಶ ರಕ್ಷಣೆ ಮಾಡುವ ತನ್ನ ರಾಜನು ಪಡೆಯುವ ಕೂಲಿಯೇ ತೆರಿಗೆ ಎಂದು ಹೇಳಲಾಗಿದೆ. ಈ ಮಾತು ಶುಕ್ರ ನೀತಿಯಲ್ಲಿ ವ್ಯಾಖ್ಯಾನವಾದದ್ದು ಹೀಗೆ.

ಸ್ವಮಾನವೃತದಾಸ್ಪತ್ವೆ ಪ್ರಜಾನಾಂಚ ನೃಪಃ ಕೃತಃ

ಬ್ರಹ್ಮಣಾ ಸ್ವಾಮಿರೂಪಸ್ತು ಪಾಲನಾರ್ಥಹಿ ಸರ್ವದಾ

ಜನತೆಯ ರಕ್ಷಣೆಗಾಗಿ ಪ್ರಗತಿಗಾಗಿ ದುಡಿದು ತೆರಿಗೆ ರೂಪದಲ್ಲಿ ಕೂಲಿ ಪಡೆಯುವ ಸೇವಕರನ್ನು ದೇವರು ಒಡೆಯನ ರೂಪದಲ್ಲಿ ಸೃಷ್ಟಿಸಿದ್ದಾನೆ. ರಾಜನು ದೇಶವನ್ನು ರಕ್ಷಿಸುವುದಕ್ಕೆ ಪ್ರಜೆಗಳು ನೀಡುವ ಪ್ರತಿಫಲವೇ ತೆರಿಗೆಗಳೆಂದು ಸ್ಮೃತಿಗಳು ವ್ಯಾಖ್ಯಾನಿಸಿವೆ. ಗಂಗಾವತಿ ತಾಲೂಕಿನ ದಾನ ಶಾಸನಗಳನ್ನು ಅವಶೋಕಿಸಿರೆ ಆ ಕಾಲದಲ್ಲಿ ಪ್ರಚಲಿತವಿದ್ದ ತೆರಿಗೆ ಸುಂಕಗಳ ಬಗ್ಗೆ ಹೆಚ್ಚಿ ವಿವರಗಳು ಲಭ್ಯವಾಗುತ್ತವೆ. ಭೂಕಂದಾಯ ಜೊತೆಗೆ ಆಸ್ತಿ, ವೃತ್ತಿತೆರಿಗೆ, ವಾಣಿಜ್ಯ ತೆರಿಗೆ, ಸಾಮಾಜಿಕ ತೆರಿಗೆ ಮೊದಲಾದವುಗಳು ಅಸ್ತಿತ್ವದಲ್ಲಿ ಇದ್ದುದನ್ನು ಮನಗಾಣುತ್ತೇವೆ. ಭೂ ತೆರಿಗೆಯ ಸಂಗ್ರಹಣೆಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಸೂಚನೆಗಳಿವೆ. ಆದರು ಗಂಗಾವತಿ ತಾಲೂಕಿನಲ್ಲಿ ಭೂಕಂದಾಯಕ್ಕೆ ಸಂಬಂಧಿಸಿದಂತೆ ಹಳೆ ಅಯೋಧ್ಯೆ ಶಾಸನವೊಂದರಲ್ಲಿ "ಚೆನ್ನಮಲ್ಲಿಕಾರ್ಜುನ ಒಡೆಯನಿಗೆ ನಿರಾಸಿ ಮಠಕ್ಕೆ ಮಾನ್ಯವಾಗಿ ಭೂಮಿಯನ್ನು ನೀಡಿ ಆ ಸ್ಥಳದಲ್ಲಿ ಬದನೆಕಾಯಿ, ತೆಂಗು, ಹಲಸು, ಮುಂತಾದ ಬೆಳೆಗಳನ್ನು ಬೆಳೆದುಕೊಂಡು ಶಿವಪೂಜೆ ಮಾಡಬೇಕೆಂದು ಹೇಳುತ್ತಾನೆ. ಕೆಸರಟ್ಟಿ ಶಾಸನವೊಂದರಲ್ಲಿ ಭಾರದ್ವಜ ಗೋತ್ರದ ಮಗ ತಿಂಮಯ್ಯ ಗೌತಮಗೋತ್ರ ಕೊಕಲೆಟಿಯ ಮಗ ಹಜಪಯ್ಯ ಇವೆರಿಬ್ಬರು ಕೃಷ್ಣದೇವರ ಅಮೃತಪಡಿಗೆ ಇಕ್ಕಳದ ಹೊಲ, ನಾಗುಳದ ಗದ್ದೆ ಹಾಗೂ ತೋಟವೊಂದನ್ನು ದಾನ ನೀಡುತ್ತಾರೆ.[೫೫] ವೃತ್ತಿ ತೆರಿಗೆ ವ್ಯಕ್ತಿಗತ ತೆರಿಗೆ ಸಂಬಂಧಿಸಿದಂತೆ ಶಾಸನಗಳು ಕಾಣಬಹುದು. ಆನೆಗೊಂದಿ ಶಾಸನವೊಂದರಲ್ಲಿ ಸದಾಶಿವರಾಯನು ಆನೆಗಂದಿ ಅಂಬಿಗರ (ಹರಗೋಲು) ನಾಗಜೋಗಿ ಮತ್ತು ಬಸವ ಜೋಗಿಯವರಿಗೆ ಒಟ್ಟು ೩೦ ಕೊಳಗ ನೀರುಭೂಮಿಯನ್ನು ನೀಡಿ ಅದರ ಆದಾಯವನ್ನು ಇವರು ಅನುಭವಿಸುತ್ತಾ ಬ್ರಾಹ್ಮಣ ಸಾಧುಸಂತರ ಸೇವೆ ಮಾಡಿಕೊಂಡಿಬೇಕೆಂದು ವಿಧಿಸುತ್ತಾನೆ. (ರಿಯಾಯಿತಿ ತೆರಿಗೆ) ಮತ್ತೊಂದು ಆನೆಗೊಂದಿ ಶಾಸನವೊಂದರಲ್ಲಿ ಸದಾಶಿವರಾಯ ಆಳುತ್ತಿರುವಾಗ ಬೋವರು ಮತ್ತು ಅಂಬಿಗರಿಗೆ ಮಹಲಿಂಗ ಒಡೆಯರಿಗೆ ತಾವು ಹೊಳೆಗೆ ಬಿಡುವ ಚಿಕ್ಕ ಹೆರಿಗೋಲು ಮತ್ತು ದೊಡ್ಡ ಹೆರಿಗೋಲುಗಳ ಮೇಲಿನ ಹಣವನ್ನು ನೀಡುವುದಾಗಿ ತಿಳಿಸಿದರು. (ರಿಯಾಯಿತಿ)[೫೬] ಮತ್ತೊಂದು ಕನಕಗಿರಿ ಶಾಸನವೊಂದರಲ್ಲಿ ಸದಾಶಿವರಾಯನ್ನು ನಾವಿಂದರಾದ ತಿಂಮೋಜ, ಕೋದಂಡಜರಿಗೆ ಕನಕಗಿರಿ ಬಿಟ್ಟಿ ಬಿಡಾರವನ್ನು ತೆರಿಗೆಯಾಗಿ ಬಿಟ್ಟು, ಪಾಲಿಸಿಕಂಡು ಹೋಗಬೇಕೆಂದು ಶಿಲಾಶಾಸನವು ಹೇಳುತ್ತವೆ.[೫೭] ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ ಸದಾಶಿವರಾಯನ ಆಳ್ವಿಕೆಯಲ್ಲಿ ಅವನ ಕಾರ್ಯಕರ್ತನಾದ ಶ್ರೀರಂಗರಾಜ

ರಾಮರಾಜದೇವ ಮಹಾ ಅರಸರು ಕ್ಷೌರಿಕರಾದ, ತಿಂಮೋದ ಕೊಡೋಜ, ಭದ್ರೋಜರಿಗೆ, ಏನನ್ನು ದಾನ ನೀಡಿದ ಉಲ್ಲೇಖವಿದೆ.[೫೮] ವಾಣಿಜ್ಯ ತೆರಿಗೆ ವ್ಯಾಪಾರ ಮೇಲೆ ಕೂಡ ತೆರಿಗೆ ಹಾಕುತ್ತಿದ್ದರು. ವಿಪ್ರಶಾಸನವೊಂದರಲ್ಲಿ ವಿಪ್ರನಾರಾಯಣ ದೇವರಿಗೆ ಎಲೆಗಾರರು ಪೆನ್ನವರ್ಣದವರು ನೂರು ಎಲೆಯನ್ನು ಅಂದಕಕ್ಕೆ ೫೦ ಎಲೆಯನ್ನು ಬಿಟ್ಟ ವಿಷಯ ಉಲ್ಲೇಖಿಸಿದೆ.[೫೯]

ಸಾಮಾಜಿಕ ತೆರಿಗೆ ಆಯಾ ದೇವಸ್ಥಾನ ಛತ್ರ, ಅಗ್ರಹಾರಗಳಿಗೆ ಬಿಟ್ಟುಕೊಟ್ಟ ತೆರಿಗೆಗೆ ಸಾಮಾಜಿಕ ತೆರಿಗೆ ಎನ್ನುವರು ಹಿರೆಜಂತಗಲ್ ಶಾಸನವೊಂದರಲ್ಲಿ ಸದಾಶಿವರಾಯನ ಮಾಂಡಕನಾದ ರಾಮರಾಜನ ತಮ್ಮನಾದ ವೆಂಕಟಾದ್ರಿ ಕಾರ್ಯಕರ್ತನಾದ ಚಂದ್ರಗಿರಿಯ ದೇಮರಸೆಯ್ಯನವರು ಹಿರೆಜಂತಗಲ್‌ದ ದೇವಾಲಯಗಳಿಗೆ ಶಿವಪೂಜಕರಿಗೆ, ದಾಸರಿಗೆ ಭಟ್ಟರಿಗೆ ಜೋಯಿಸರಿಗೆ ಮುಂತಾದವರಿಗೆ ಚಿಕ್ಕ ಜಂತಗಲ್‌ನಲ್ಲಿ ಮಾಗಣಿಯ ಗದ್ದೆಯನ್ನು ಇಂತಿಷ್ಟು ಅಳತೆ ಮೂಲಕ ದಾನ ನೀಡುತ್ತಾನೆ. ಹನುಮನಹಳ್ಳಿ ಶಾಸನವೊಂದರಲ್ಲಿ ಹನಿಯ ನಾಗಣನು ಅಂಜಿನಾದೇವಿಯ ಮತ್ತು ಹನುಮಂತದೇವರ ಅಮೃತಪಡಿಗೆ ಭಟಮಾನ್ಯವಾಗಿ ರಾಮಾಪುರದಲ್ಲಿ ಹೊಲಗದ್ದೆ ದಾನ ನೀಡಿದ ಉಲ್ಲೇಖವಿದೆ.[೬೦] ಚಿಕ್ಕರಾಮಾಪುರ ಶಾಸನವೊಂದರಲ್ಲಿ ನರಸಣ ನಾಯ್ಕನು ಕಪಿಲೇಶ್ವರ ದೇವರಿಗೆ ೧೫ ಕೊಳಗ ಮಾನ್ಯವನ್ನು ನೀಡಿದ ಉಲ್ಲೇಖವಿದೆ.[೬೧] ರಾಮದುರ್ಗ ಶಾಸನವೊಂದರಲ್ಲಿ ಆನೆಗೊಂದಿಯ ಚಪ್ಪರದ ಹನಮಂತ ದೇವರಿಗೆ ನೈವೇದ್ಯ ದೀಪಾರಾಧನೆ ಸಲ್ಲುವಾಗಿ ಸಂಗಮಾಪುರದ ಖಂಡುಕ (೧೨ ಖಂಡಕ)ವಾಗಿ ಹೆರಳ ಗದ್ದೆಯನ್ನು ದಾನ ನೀಡಿದ ಉಲ್ಲೇಖವಿದೆ.[೬೨] ಮತ್ತೊಂದು ಕನಕಗಿರಿ ಶಾಸನವೊಂದರಲ್ಲಿ ತಿರುಮಲರಾಜ ಆಳ್ವಿಕೆ ಕಾಲದಲ್ಲಿ ದಳವಾಯಿಯಾದ ಚಂದತೆಯನು ಶ್ರೀ ಕನಕನಾಥ ದೇವರಿಗೆ ಒಂದು ಕೊಳಗದ ಭೂಮಿಯನ್ನು ನೀಡಿದ ಉಲ್ಲೇಖವಿದೆ.[೬೩] ಮತ್ತೊಂದು ಕನಕಗಿರಿ ಶಾಸನವೊಂದರಲ್ಲಿ ನರಸಿಂಹ ದೇವನು ಕನಕಗಿರಿನಾಥನಿಗೆ ಅಮೃತಪಡಿಗೆ ಗೋಡಿರಹಾಳ ಗ್ರಾಮವನ್ನು ದಾನ ನೀಡಿದನೆಂದು ಉಲ್ಲೇಖವಿದೆ.[೬೪] ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ ಸಾಳುವ ದೇವರಾಯನು ಅಮರೇಶ್ವರ ನೈವೇದ್ಯಕ್ಕೆ ಯಲಬರಿಗೆಯ ಸೀಮೆಯ ಸೇರುವ ಸೂಳೆಯ ಕೆರೆಯ ಗದ್ದೆಯನ್ನು ದಾನವಾಗಿ ನೀಡಿದ ಉಲ್ಲೇಖವಿದೆ.[೬೫] ಮತ್ತೊಂದು ಮುಷ್ಮೂರ ಶಾಸನದಲ್ಲಿ ವಿಠಲ ದೇವರ ಅಮೃತಪಡಿಗೆ ಮುಸ್ತೂರು ಕುಂಟೋಜಿ ಗ್ರಾಮಗಳು ದಾನ ನೀಡಿದ ತಿಳಿಸುತ್ತಾರೆ.[೬೬] ಮತ್ತೊಂದು ಸಿಂಗನಾಳ ಶಾಸನವೊಂದರಲ್ಲಿ ಮಾಲ್ಯವಂತ ರಘುನಾಥ ದೇವರ ಅಮೃತ ಪಡಿಗೆ ಸಿಂಗನಾಳ ಗ್ರಾಮವನ್ನು ದಾನ ನೀಡಿದ ಉಲ್ಲೇಖವಿದೆ.[೬೭] ಮತ್ತೊಂದು ಗುಂಡೂರ ಶಾಸನವೊಂದರಲ್ಲಿ ಕನ್ನಪ್ಪ ಒಡೆಯನ್ನು ಬೆಂಬಲ ಕೋಟೆಯ ನಾಗನಾಥ ದೇವರಿಗೆ ಗುಂಡೂರಿನಲ್ಲಿ ಹೊಸದಾಗಿ ನೀಡಿದ ಐಗುಳದ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.[೬೮] ಮತ್ತೊಂದು ಬರಗೂರ ಶಾಸನವೊಂದರಲ್ಲಿ ಬರಗೂರಿನಗೌಡ ಮತ್ತು ಶಾನುಭೋಗರು ಪಂಡಿತಾರಾಧ್ಯ ಶಿವಪ್ಪ ದೇವರಿಗೆ ಮಾನ್ಯವಾಗಿ ಭೂಮಿಯನ್ನು ದಾನ ನೀಡುತ್ತಾನೆ ಎಂದು ಉಲ್ಲೇಖವಿದೆ.[೬೯] ಇಲ್ಲಿ ಇನ್ನೊಂದು ವಿಶೇಷ ಎಂದರೆ ರಾಜನಿಗೆ ಒಳ್ಳೆದಾಗಲಿ ಎಂಬ ಭಾವನೆಯಿಂದ ಅವನ ಮಾಂಡಲಿಕರು, ಮಂತ್ರಿಗಳು, ದಳವಾಯಿಗಳು, ದೇವಾಲಯಗಳಿಗೆ ತೆರಿಗೆಯಾಗಿ ಬಿಟ್ಟ ದಾನ ಕಂಡುಬರುತ್ತದೆ. ಆನೆಗೊಂದಿ

ಶಾಸನವೊಂದರಲ್ಲಿ ಅಚ್ಯುತರಾಯನ ಮಂತ್ರಿ ತಿಮ್ಮರಸಯ್ಯನವರು ಅಚ್ಯುತರಾಯನಿಗೆ ಪುಣ್ಯವಾಗಲೆಂದು ಮಹೇಸನ ದೇವರ ಗುಡಿಯ ನೈವೆಧ್ಯಕ್ಕೆ ಹೊಲವೊಂದನ್ನು ದಾನ ನೀಡಿದ ಉಲ್ಲೇಖವಿದೆ.[೨೦]

ಆನೆಗೊಂದಿ ಶಾಸನವೊಂದರಲ್ಲಿ ಅಚ್ಯುತರಾಯನಿಗೆ ಪುಣ್ಯವಾಗಲೆಂದು ಅವನ ಮಂತ್ರಿಯಾದ ಬಸವರಾಜ ಚವರದ ಕೊನಪ್ಪನಾಯಕನ ಮಗ ಮಾದವಯ್ಯ ಮತ್ತು ಪೆನುಗೊಂಡ ನಾಗಯ್ಯರು ದೇವರಿಗೆ ದೇವರಿಗೆ ದಿನನಿತ್ಯ ನೈವೇದ್ಯ ಸಲುವಾಗಿ ಅರವಟ್ಟಿಗೆ ನೀಡಿದನು.[೨೧] ಹನುಮನಾಳ ಶಾಸನವೊಂದರಲ್ಲಿ ಚೋಮನವೊಡೆಯನ್ನು ಅಚ್ಯುತರಾಯನಿಗೆ ಪುಣ್ಯವಾಗಲೆಂದು ಯಲಬುರ್ಗಿಯ ಸೀಮೆಯ ನರಸಿಂಹ ದೇವರ ಪಡಿಗೆ ಗ್ರಾಮವೊಂದನ್ನು ನೀಡಿದ ಉಲ್ಲೇಖವಿದೆ.[೨೨]

ಹೀಗೆ ಶಾಸನಗಳಲ್ಲಿ ತೆರಿಗೆ ಪದ್ಧತಿಯ ವರ್ತಕರ ಮೇಲೆ ಮಾರಾಟ ಮಾಡುವ ವಸ್ತುಗಳ ಮೇಲೆ ತೆರಿಗೆ ಇರುವಂತೆಯೇ ಅವರು ಲಾಭಾದಾಯಕ ವ್ಯಾಪಾರಕ್ಕಾಗಿ ಸರಕುಗಳ ಮೇಲೆ ತೆರಿಗೆ ಹಾಕುತ್ತಿದ್ದರೆಂದು ಕಂಡುಕೊಳ್ಳಬಹುದು. ಆದರೆ ಇಲ್ಲಿ ಬಹಳಷ್ಟು ತೆರಿಗೆಗಳನ್ನು ಆಯಾ ದೇವಸ್ಥಾನ ಛತ್ರ ಮತ್ತು ಅಗ್ರಹಾರಗಳಿಗೆ ಬಿಟ್ಟುಕೊಡುವುದರ ಮೂಲಕ ಆಯಾ ಊರಿನ ತೆರಿಗೆ ಆದಾಯದಲ್ಲಿ ಸ್ವಲ್ಪ ಭಾಗವನ್ನು ಅಲ್ಲಿನ ವ್ಯವಸ್ಥೆಗೆ ಉಪಯೋಗಿಸುತ್ತಿದ್ದರು. ದಾನ ಶಾಸನಗಳ ಉದ್ದಕ್ಕು ಕಂಡುಬರುವ ಸರ್ವಬಾದ ಪರಿಹಾರ ಎಂಬಂತಹ ಮಾತುಗಳ ದಾನ ದತ್ತಿಗಳನ್ನು ಕರ ವಿನಾಯಿತಿಗಳನ್ನು ಪಡೆದಂತೆ ತೆರಿಗೆ ಸುಂಕಗಳಿಂದ ಮುಂತಾದವನ್ನು ಸೂಚಿಸುತ್ತದೆ.

**ಟಿಪ್ಪಣಿಗಳು**

೧. I.K.Shrama J.I.H. Vol XL, Pt II, P 302

೨. (Mahabharata, Sabhapurva VTT, Sharma B.L Economic Ideas in Anaicnt India before Kautilya New Delhi 1987, p 121 - 122)

೩. Diksuchi V.R.R, A History of Iricigation in South India in Journal of Indian Culture, 1945, P 71 - 72

೪. I bid, P 118 - 124 and the relevant in Scriptions quetied thain

೫. Epi Ind Vol IX P 156, ARI EPI No 541 to 1905

೬. S.I.I Vol IV No 651 This was issoed by the king Nanni chodua Teluga choeaKg who was ruling kanchi

೭. Tirumalai Tirumolai R, studies in Ancient Township of Pudukatti, Madras 1981.P.139

೮. My A.R.1929.P.50and Inscription No-1.P.211.

೯. Ep Ind vol xxxII, P.211

೧೦. I bid, No 137, P.410

೧೧. I bid, No 78, P.266

೧೨. Digest the Annual report of kannada Research Bombay Province.1940-41-P.14

೧೩. My .AR.1913 No-13, P 33

೧೪. ಕ.ವಿ.ವಿ, ಸಂ ೨, ಕೊಪ್ಪಳ

೧೫. I bid.No-162.176-339-340-47

೧೬. SI.I vol iv No 260.P.57

೧೭. Op cit 9 and ARIEP 1903-P.210.

೧೮. Katreish C.T.M.OP. cit 5 P.51

೧೯. Kalall John op at P 232

೨೦. Epi carn xidg-34, ಕನ್ನಡ ಸಾಹಿತ್ಯ ಚರಿತ್ರೆ ಸಂ, ಮೈಸೂರು, ೧೯೮೧, ಪುಟ ೩೮೨ - ೮೩

೨೧. ಕ.ವಿ.ವಿ, ಸಂ ೨, ಗಂ ೭೪,

೨೨. ಕ.ವಿ.ವಿ, ಸಂ ೨, ಗಂ ೮೯,

೨೩. ಕ.ವಿ.ವಿ, ಸಂ ೨, ಗಂ ೯೦ವ,

೨೪. ಕ.ವಿ.ವಿ, ಸಂ ೨, ಗಂ ೩೯,

೨೫. ಕ.ವಿ.ವಿ, ಸಂ ೨, ಗಂ ೬೮

೨೬. ಕ.ವಿ.ವಿ, ಸಂ ೨, ಗಂ ೯೧,

೨೭. ಕ.ವಿ.ವಿ, ಸಂ ೨, ಯಲ ೨೯

೨೮. ಕ.ವಿ.ವಿ, ಸಂ ೨, ಯಲ ೧೩

೨೯. ಕ.ವಿ.ವಿ, ಸಂ ೨, ಕುಷ್ಟಗಿ ೨೨

೩೦. ಅದೇ

೩೧. ಕ.ವಿ.ವಿ, ಸಂ ೨, ಗಂ ೨

೩೨. ಅದೇ ೧೮

೩೩. ಅದೇ ೬೯

೩೪. ಚಿದಾನಂದ ಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೪೩೨

೩೫. ಅದೇ

೩೬. ಅದೇ ೪೩೨

೩೭. ಅದೇ ೪೩೨

೩೮. ಅದೇ ೪೩೨

೩೯. ಅದೇ ೪೩೨

೪೦. ಅದೇ

೪೧. ಅದೇ

೪೨. ಅದೇ

೪೩. ಕವಿಹಂ ಶಾ ಸಂ ೧ ಬಳ್ಳಾರಿ, ಸಂಖ್ಯೆ ೨೯

೪೪. ಅದೇ

೪೫. ಕ.ವಿ.ವಿ, ಸಂ ೨, ಗಂ ೨

೪೬. ನಾಣ್ಯಶಾಸ್ತ್ರಗಳು ಡಾ. ಅಲ್ಟೇಕರ್ ಪ್ರಕಾರ

೪೭. ಅದೇ

೪೮. ನಾಣ್ಯಶಾಸ್ತ್ರ ಪುಸ್ತಕ

೪೯. ಅದೇ

೫೦. ಅದೇ

೫೧. ಅದೇ

೫೨. ಕ.ವಿ.ವಿ, ಸಂ ೨, ಗಂ ೩

೫೩. ಅದೇ ೨೮

೫೪. ಅದೇ ೬೪

೫೪. ಅದೇ ೭೩

೫೫. ಅದೇ ೩೭

೫೬. ಅದೇ ೮೨

೫೭. ಅದೇ ೯೩

೫೮. ಅದೇ ೩

೫೯. ಅದೇ ೬೩

೬೦. ಅದೇ ೬೩

೬೧. ಅದೇ ೬೪

೬೨. ಅದೇ ೬೮

೬೩. ಅದೇ ೮೦

೬೪. ಅದೇ ೯೧

೬೫. ಅದೇ ೯೭

೬೬. ಅದೇ ೯೮

೬೭. ಅದೇ ೧೦೧

೬೮. ಅದೇ ೫೪

೬೯. ಅದೇ ೫೫

೭೦. ಅದೇ ೯೦

# ಅಧ್ಯಾಯ ಆರು

## ಧಾರ್ಮಿಕ ಅಧ್ಯಯನ

ಮಾನವನ ಜೀವನದಲ್ಲಿ ಧರ್ಮವು ಆದಿಯಿಂದಲೂ ಪ್ರಮುಖ ಪಾತ್ರವಹಿಸುತ್ತದೆ. ಧರ್ಮವು ಮಾನವನ ಉದಾತ್ತ ವೈಶಿಷ್ಟ್ಯವಾಗಿದೆ. "ಮಾನವ ತನ್ನ ಜೀವನದ ಅಂತಿಮ ಗುರಿಯನ್ನು ಸಾಧಿಸಿಕೊಳ್ಳಲು ಒಂದು ಸಾಧನರೂಪವಾಗಿ ಬೆಳೆಸಿಕೊಂಡು ಬಂದ ನಂಬಿಕೆಗಳೇ ಧರ್ಮ." ಧರ್ಮವೆಂದರೆ ಅಲೌಕಿಕ ಶಕ್ತಿಯಲ್ಲಿ ನಂಬಿಕೆ ಮತ್ತು ನಂಬಿಕೆಗೆ ತಕ್ಕಂತೆ ಆಚರಣೆ ಎಂದಾಗುತ್ತದೆ. ಪ್ರಾಚೀನವಾದ ಜಾನಪದ ನಾಗರಾಧನೆಯೂ ಶೈವ, ವೈಷ್ಣವ, ಬೌದ್ಧ ಮತ್ತು ಜೈನ ಮೊದಲಾದ ಮತ ಪಂಥಗಳು ಜನರ ಧಾರ್ಮಿಕ ಜೀವನದಲ್ಲಿ ಇಂದಿಗೂ ಉಳಿದುಕೊಂಡು ಬಂದಿವೆ. ಕ್ರಿಸ್ತಪೂರ್ವ ಮತ್ತು ಆರಂಭದ ಕಾಲದಲ್ಲಿ ವೈದಿಕ ಧರ್ಮ ಹಾಗೂ ಅದರ ಭಾಗವಾಗಿದ್ದ ಯಜ್ಞ ಯಾಗಾದಿಗಳ ಪ್ರಚಲಿತವಾಗಿದ್ದವು.

ಧರ್ಮವು ಅನುಭವಾತ್ಮಕವಾದುದು ಆದುದರಿಂದ ಈ ಅನುಭವವನ್ನು ವಿವರಿಸುವ ಪದಗಳ ಶಕ್ತಿಗೆ ಮೀರಿದ ವಿಷಯವಾಗಿದೆ. ಧರ್ಮ ಎಂಬ ಶಬ್ದವು ಸಂಸ್ಕೃತ ಮೂಲ 'ದೃ' ಎಂಬ ಧಾತುವಿನಿಂದ ಬಂದಿದೆ. 'ದೃ' ಎಂದರೆ 'ಧಾರಯಿತಿ' ಇತಿ ಧರ್ಮ ಎನ್ನುತ್ತಾರೆ. ಯಾವುದು ಮಾನವನ ಸಾಮಾನ್ಯ ಮಟ್ಟದಿಂದ ಎತ್ತಿಹಿಡಿಯುವುದೋ ಅಥವಾ ಕಾಪಾಡುವುದೋ ಅದೇ ಧರ್ಮ.

**ವ್ಯಾಖ್ಯಾನಗಳು :**

'ಹರ್ಬರ್ಟ್‌ಸ್ಪೆನ್ಸರ್' ಅವರು 'ವಿಶ್ವದಲ್ಲಿ ಅಡಗಿರುವ ರಹಸ್ಯಗಳನ್ನು ಭೇದಿಸುವುದೇ ಧರ್ಮ' ಎಂದಿದ್ದಾರೆ.

ಇ.ಬಿ.ಟೇಲರ ಪ್ರಕಾರ "ಅಲೌಕಿಕ ಶಕ್ತಿಯಲ್ಲಿ ಮಾನವನು ಹೊಂದಿರುವ ನಂಬಿಕೆಯಾಗಿದೆ. ನಂಬಿಕೆಯ ಶಕ್ತಿಯು ಅಗೋಚರವಾಗಿ ಜಗತ್ತನ್ನು ಆಳುತ್ತದೆ. ಅಂತಹ ಶಕ್ತಿ ಸಾನಿಧ್ಯವನ್ನು ಪಡೆಯುವ "ಹಂಬಲವೇ ಧರ್ಮ." ಲೂಯಿಯವರ ಪ್ರಕಾರವಾದ ಅಸಾಧಾರಣ ಹಾಗೂ ಭಯ ಭಕ್ತಿಯನ್ನು ಹುಟ್ಟಿಸುವಂತಹ ರೂಪಗಳಿಗೆ ಮಾನವ ತೋರುವ ಸಹಜವಾದ ಪ್ರತಿಕ್ರಿಯೆ ಧರ್ಮವಾಗಿದೆ."

**ಪ್ರಾಗೈತಿಹಾಸಿಕ ಕಾಲದ ಧಾರ್ಮಿಕ ಜೀವನ :**

ಪ್ರಾಗೈತಿಹಾಸಿಕ ಕಾಲಘಟ್ಟಕ್ಕೆ ಸಂಬಂಧಿಸಿದ ನೆಲೆಗಳನ್ನು ಗಂಗಾವತಿ ತಾಲೂಕಿನ ಪರಿಸರದಲ್ಲಿ ಗಮನಿಸಬಹುದು. (ಧಾರ್ಮಿಕ ಕಟ್ಟಡಗಳು) ಕಬ್ಬಿಣ ಶಿಲಾಯುಗದ ಹಿರೇಬೆಣಕಲ್ ಮತ್ತು ಮಲ್ಲಾಪೂರ ಗ್ರಾಮದ ಗುಡ್ಡಗಳಲ್ಲಿ ಕಂಡುಬರುತ್ತವೆ. ಹಿರೇಬೆಣಕಲ್‌ನಲ್ಲಿ ಪ್ರಾಗೈತಿಹಾಸಿಕ ಕಾಲದ ಚಿತ್ರಗಳ ೧೦ ಗುಹೆಗಳು ಇವೆ. ಒಂದೊಂದು ಗುಹೆಯಲ್ಲಿ ಬೇರೆ ಬೇರೆ ಚಿತ್ರಗಳು ಕಂಡುಬರುತ್ತವೆ. ಮನುಷ್ಯ ಈಟಿ, ಕೊಡಲಿ, ಆಕಳು, ನವಿಲು, ಕರಡಿ, ಗೂಳಿ, ಕುದುರೆ ಸವಾರರು, ನವಿಲು, ಚಿಗರಿ, ಹುಲಿ, ದನದ ಚಿತ್ರಗಳು ಧಾರ್ಮಿಕ ನಂಬಿಕೆಗಳೊಂದಿಗೆ ಸಂಬಂಧಿಸಿರಬಹುದು. ಇಂದಿಗೂ ಸಹ ಗೂಳಿಯನ್ನು ಬಸವ ಎಂದು ಪೂಜಿಸುವ ಸಂಪ್ರದಾಯವಿದೆ. ಆದರೆ ಚಿತ್ರಗಳ ಹಿನ್ನೆಲೆಯಲ್ಲಿ ಇದ್ದಿರಬಹುದಾದ ಧಾರ್ಮಿಕತೆಯ ಸ್ವರೂಪ ಸ್ಪಷ್ಟವಿಲ್ಲ.

ಕಬ್ಬಿಣ ಶಿಲಾಸಂಸ್ಕೃತಿಯ ಜನರ ವೈಶಿಷ್ಟ್ಯವೆಂದರೆ ಸತ್ತವರ ಸಂಸ್ಕಾರ ಮಾಡುವ ಕ್ರಮ ನೈಸರ್ಗಿಕವಾಗಿ ದೊರೆಯುವ ಒರಟಾದ ದೊಡ್ಡ ದೊಡ್ಡ ಕಲ್ಲು ಬಂಡೆಗಳನ್ನು ಉಪಯೋಗಿಸಿ ಗೋರಿಗಳನ್ನು ಕಟ್ಟುತ್ತಿದ್ದರು. ಈ ಗೋರಿಗಳಲ್ಲಿ ಶವದ ಅವಶೇಷಗಳನ್ನು ಇಟ್ಟು ಮುಚ್ಚುತ್ತಿದ್ದರು. ಪ್ರಾಗೈತಿಹಾಸಿಕ ಕಾಲದ ಮಾನವನು ತನ್ನ ಹಿರಿಯರನ್ನು ಸ್ಮಾರಕಗಳ ಮೂಲಕ ನೆನಪಿಸುವ ಗೌರವಿಸುವ ಗುಣವನ್ನು ತೋರಿಸಿದ್ದಾನೆ. ಹೀಗೆ ಪ್ರಾಗೈತಿಹಾಸಿಕ ಕಾಲದಲ್ಲಿ ಧಾರ್ಮಿಕ ಕಲ್ಪನೆ ಮೂಡಿಬರುತ್ತದೆ.

**೧. ನಾಗರಾಧನೆ :**

ಜನಪದ ಧರ್ಮವೆನಿಸಿದ ನಾಗಾರಾಧನೆ ವೇದಗಳಗಿಂತ ಪ್ರಾಚೀನ. ವೇದ ಕಾಲದಲ್ಲಿ ನಾಗ ಪ್ರತೀಕವುಳ್ಳ ಜನರಿದ್ದರು.[೧] ವೇದಗಳಲ್ಲಿ ನಾಗರನ್ನ 'ಯಾತುಧಾನ'[೨] ನಾಗದೇವರೆಂದು ಕರೆಯುತ್ತಾರೆ. ಸಿಂಧೂ ಸಂಸ್ಕೃತಿಯ ನಾಗ ಮುದ್ರಿಕೆಗಳಲ್ಲಿ ನಾಗ ಶಿವನಿಗೆ ಆಭರಣವಾದರೆ ವಿಷ್ಣುವಿಗೆ ಶಯನ, ಗಣೇಶನಿಗೆ ನಾಗವೇ ಉದರಬಂಧ, ತಪೋನಿರತ ಬುದ್ಧನಿಗೆ ನಾಗರಕ್ಷಕ. ಆದ್ದರಿಂದ ನಾಗ ಎಲ್ಲಾ ಮತಾವಲಂಬಿಗಳಿಗೆ ಪೂಜ್ಯವಾಗಿದ್ದಾನೆ.

**೨. ಬೌದ್ಧ ಧರ್ಮ :**

ಬೌದ್ಧ ಧರ್ಮವು ಕರ್ನಾಟಕಕ್ಕೆ ಬಂದದ್ದು ಅಶೋಕನ ಕಾಲಘಟ್ಟದಲ್ಲಿ. ಅಶೋಕ ನಂತರದಲ್ಲಿ ಬೌದ್ಧಧರ್ಮವನ್ನು ಹೆಚ್ಚು ಜನಪ್ರಿಯಗೊಳಿಸಿದನು. ಅಶೋಕನು ದಕ್ಷಿಣ ಭಾರತಕ್ಕೆ ಮಹಾಮಾತ್ರ ಅಧಿಕಾರಿಗಳನ್ನು ಕಳಿಸಿ ಇಲ್ಲಿ ಬೌದ್ಧ ಧರ್ಮ ಭದ್ರವಾಗಿ ನೆಲೆಗೊಳಿಸಲು ಕಾರಣೀಭೂತನಾದನು. ಕ್ರಿ.ಪೂ.

೬ನೆಯ ಶತಮಾನದಲ್ಲಿ ಪ್ರಾರಂಭವಾದ ಈ ಧರ್ಮವು ಕ್ರಿ.ಶ. ೫ನೆಯ ಶತಮಾನದವರೆಗೆ ತನ್ನ ಪ್ರಭಾವವನ್ನು ಬಿರಿತ್ತು.

ಚಾಲುಕ್ಯರ ಅವಧಿಯಲ್ಲಿ ನರ್ಮದೆಯ ದಕ್ಷಿಣಾ ಪಥವು ಉತ್ತರದ ಮೇರೆಯವರೆಗೆ ನಿಗದಿಯಾಗಿತ್ತು. ಗೋದಾವರಿ ತೀರ ಉದ್ದಕ್ಕು ಇಂದಿನ ಮಹಾರಾಷ್ಟ್ರ, ಕರ್ನಾಟಕ ಆಂಧ್ರಗಳನ್ನೊಳಗೊಂಡ ಪ್ರದೇಶಗಳಲ್ಲಿ ಬೌದ್ಧ ಧರ್ಮದ ಪ್ರಭಾವ ಗಾಢವಾಗಿತ್ತು. ಇಷ್ಟಲ್ಲದೆ ಬೌದ್ಧ ಪಾಲಿ ಸಾಹಿತ್ಯದಲ್ಲಿ ಉಲ್ಲೇಖಗೊಡಿರುವ 'ತಗರಶಿಕನ್' ಎಂಬ ಗುರುವಿನ ಮೂಲ ತಗರನಾಡು ಅಥವಾ ಥೇರ್ (ಬೀದರ್ ಜಿಲ್ಲೆಯಾಚೆ ಮಹಾರಾಷ್ಟ್ರದ ಉಸ್ಮಾನಬಾದ ಜಿಲ್ಲೆಯಲ್ಲಿ) ಎಂಬ ಅಭಿಪ್ರಾಯವಿದೆ.[೮] ಈ ತಗರ ಗೋಕರ್ಣದ ಬಳಿಯಿರುವ ಈಗಿನ ತೋರ್ಕೆ ಎಂಬ ಅಭಿಪ್ರಾಯವು ಇದೆ.[೯] ವಿನಯ ಪಿಟಕದ ಚುಲ್ಲವಗ್ಗದಲ್ಲಿ ಎರಡನೆಯ ಬೌದ್ಧ ಸಂಗೀತಿಯ ವಿವರಗಳು ಸಿಗುತ್ತವೆ. ಅಲ್ಲಿ ದಕ್ಷಿಣಾಪಥದ ವ್ಯಾಪಾರಿಗಳ ಉಲ್ಲೇಖ ಸಿಗುತ್ತದೆ. 'ಜಾತಕ' ಕಥೆಗಳ ಕಾಲವನ್ನು ಕ್ರಿ.ಪೂ ೪ನೆಯ ಶತಮಾನವೆಂದು ಊಹಿಸಬಹುದು. ಇವುಗಳ ಜೋಡಣೆಯ ಕಾಲದಲ್ಲಿ ಬೌದ್ಧರಿಗೆ ದಕ್ಷಿಣ ಭಾರತದ ಪರಿಚಯವಿದ್ದುದು ಸ್ಪಷ್ಟವಿದೆ. ದಕ್ಷಿಣ ಭಾರತದ ಎರಡು ಸ್ಥಳಗಳಾದ ಮಹಿಷ ಮಂಡಲ ಮತ್ತು ಬನವಾಸಿ ಇಲ್ಲಿ ಉಲ್ಲೇಖಗೊಂಡಿವೆ. ಕ್ರಿ.ಪೂ. ೨೪೨ಕ್ಕೆ ಸೇರಿದ್ದ ಬೌದ್ಧ ಸಂಗೀತಿಯ ಬಳಿಕ ಈ ಸ್ಥಳಗಳಿಗೆ ಧರ್ಮಗುರುಗಳು ಬಂದದು ಸ್ಪಷ್ಟವಿದೆ. ರೈಸ ಅವರು ಭಾವಿಸಿದ್ದಂತೆ ಮಹಿಷ ಮೈಸ್ ಆಗಿ ಕನ್ನಡದ ಊರು ಸೇರಿ ಮೈಸೂರು ಆಗಿರುವ ಸಾಧ್ಯತೆಯಿದೆ. ಈಚೆಗೆ ವಿ.ವಿ.ಮಿರಾಘ ಮತ್ತು ಡಿ.ಸಿ.ಸರ್ಕಾರ್ ಈ ಇಬ್ಬರು ವಿದ್ವಾಂಸರು ಸೂಚಿಸಿದ ಇನ್ನೊಂದು ಅಂಶವು ಇಲ್ಲಿ ಗಮನಾರ್ಹ. ಕ್ರಿ.ಶ. ೨ ಮತ್ತು ೩ನೆಯ ಶತಮಾನಕ್ಕೆ ಸೇರಿವ ಕೆಲವು ನಾಣ್ಯಗಳ ದಾಖಲೆಗಳನ್ನು ಆಧರಿಸಿ ಮಹಿಷರೆಂಬ ವಂಶ ಇದ್ದ ಬಗ್ಗೆ ಮಿರಾಷಿಯವರು ಮೊದಲಿಗೆ ಹೇಳಿದರು. ಈ ಸ್ಥಳದ ಬಗೆಗೆ ಡಿ.ಸಿ.ಸರ್ಕಾರ್ ಅವರು ಪರಿಶೀಲಿಸುತ್ತಾ ಅದು ಕರ್ನಾಟಕದ ಭಾಗವೇ ಆಗಿದ್ದಿತು ಎನ್ನುತ್ತಾರೆ.[೧೦] ಕದಂಬ ವಿಷ್ಣುವರ್ಮ (ಕ್ರಿ.ಶ. ೫ನೆಯ ಶತಮಾನವು) ಶಾಸನವೊಂದರಲ್ಲಿ ತುಮಕೂರು ಜಿಲ್ಲೆಯ ತುಮಕೂರು ತಾಲೂಕಿನ ಹೆಬ್ಬತದಲ್ಲಿ ದೊರೆತಿದ್ದು ಅದರಲ್ಲಿ ಮಹಿಷ ವಿಷಯದ ಸಾತ್ತಿಪಾಲ್ಲಿ ಜಾರಿವಾಟ ವಿಭಾಗದಲ್ಲಿ ಹೆರ್ಬಟವೆಂಬ ಅಗ್ರಹಾರವನ್ನು ನಿರ್ಮಿಸಿ ಯಜುರ್ವೇದಿಯ ಬ್ರಾಹ್ಮಣನೊಬ್ಬನಿಗೆ ದಾನ ಮಾಡಿದ ವಿಚಾರವಿದೆ. ಆದುದರಿಂದ ಕದಂಬರ ಕಾಲದಲ್ಲಿ ಮೈಸೂರು ಪರಿಸರದ ಭಾಗಕ್ಕೆ ಮಹಿಷ ವಿಷಯವೆಂಬ ಹೆಸರಿತ್ತು ಎಂದು ಸ್ಪಷ್ಟವಿದೆ. ಇದರ ವ್ಯಾಪ್ತಿಯ ಪ್ರಾಯಶಃ ರಾಯಚೂರು ಜಿಲ್ಲೆಯ ಮಸ್ಕಿ ತನಕವು ಇದ್ದಿರಬಹುದು. ದಕ್ಷಿಣ ಭಾರತದ ಬೌದ್ಧ ಇತಿಹಾಸಕ್ಕೆ ಸಂಬಂಧಿಸಿದಂತೆ ಮಹಾವಂಶದಲ್ಲಿ ಇನ್ನೊಂದು ಮುಖ್ಯ ಸಂಗತಿಯಿದೆ. ಕ್ರಿ.ಶ. ೧ನೆಯ ಶತಮಾನದಲ್ಲಿ ಸಿಂಹಳದ ರಾಜ ದುತ್ತಗಾಮಣಿ ಅಭಯ ಎಂಬಾತ ತನ್ನ ರಾಜಧಾನಿಯಲ್ಲಿ ಮಹಾವಿಹಾರವೊಂದನ್ನು ಕಟ್ಟಿಸಿ ಅದರ ಪ್ರಾರಂಭೋತ್ಸವಕ್ಕೆ ಬೇರೆ ಬೇರೆ ಪ್ರದೇಶದ ಬೌದ್ಧ ಕೇಂದ್ರಗಳಿಂದ ಅತಿಥಿಗಳನ್ನು ಆಹ್ವಾನಿಸಿದನು. ಹಾಗೆ ನೆರೆದವರಲ್ಲಿ ಬನವಾಸಿಯ ಎಂಭತ್ತು ಸಾವಿರ ಮಂದಿ ಇದ್ದರು.[೧೧] ಕರ್ನಾಟಕದ ಕೊಪ್ಪಳದ ಗವಿಮಠ ಮತ್ತು ಪಾಲ್ಕಿಗುಂಡು ಇವೆರಡೂ

ಸ್ಥಳಗಳು ಕೊಪ್ಪಳದ ಪೂರ್ವ ಮತ್ತು ಪಶ್ಚಿಮದಲ್ಲಿರುವ ಎರಡು ಬೆಟ್ಟಗಳು ಕೆಲವು ದಿನಗಳ ಕಾಲ ಬೌದ್ಧ ಸಾಂಸ್ಕೃತಿಕ ಕೇಂದ್ರವಾಗಿದ್ದಿರಬಹುದು.

ಅಶೋಕನ ಶಾಸನೋಕ್ತವಾದ ಕೆಲವು ಸ್ಥಳಗಳ ಬಗೆಗೆ ವಿಶೇಷವಾದ ಜಿಜ್ಞಾಸೆ ನಡೆದಿದೆ. ಇದರಲ್ಲಿ ಉಕ್ತವಾದ ಸುವರ್ಣಗಿರಿ ಹಾಗೂ ಇಸಿಲ ಗಮನಿಸಬಹುದು. ಎಂ.ಎಚ್.ಕೃಷ್ಣರ ಪ್ರಕಾರ ಕನಕಗಿರಿ ಈಗಿನ ಮಸ್ಕಿ ಸಮೀಪದ ಊರು. ಬನವಾಸಿಯ ಶಾತವಾಹನ ರಾಜಮನೆತನವರು ಮಹೀಶಾಸಕ ಶಾಖೆಗೆ ಪ್ರೋತ್ಸಾಹ ಕೊಡುತ್ತಿದ್ದರು. ಇಲ್ಲಿಯ ರಾಣಿಯೊಬ್ಬಳು ಮಹೀಶಾಸರ ಆಚಾರ್ಯರುಗಳಿಗಾಗಿ ನಾಗಾರ್ಜುನಕೊಂಡದಲ್ಲಿ ಸ್ತಂಭ ಹಾಗೂ ವಿಹಾರಗಳನ್ನು ಕಟ್ಟಿಸಿದ ಉಲ್ಲೇಖಗಳು ಸಿಕ್ಕುತ್ತವೆ. ರಾಜಮನೆತನ ಅಲ್ಲದೆ ಆ ಕಾಲದ ಇತರ ಸಾಮಾಜಿಕರೂ ಬೌದ್ಧ ಧರ್ಮಕ್ಕೆ ಪ್ರೋತ್ಸಾಹ ಕೊಡುತ್ತಿದ್ದರು. ಬನವಾಸಿಯ ಭೂತಪಾಲನೆಯ ವರ್ತಕನು ಕಾರ್ಲದ ಚೈತ್ಯಾಲಯ ನಿರ್ಮಿಸಿದ್ದು ಕಂಡುಬರುತ್ತದೆ. ಶಾತವಾಹನರ ಹಾಗೂ ಅನಂತರದ ಕಾಲದಲ್ಲಿ ಪೈಠಣವಲ್ಲದೆ ಕರ್ನಾಟಕದಲ್ಲಿ ಇದುವರೆಗೆ ಬೆಳಕಿಗೆ ಬಂದ ಬೌದ್ಧ ನೆಲೆಗಳೆಂದರೆ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಗುಲ್ಬರ್ಗಾ ಜಿಲ್ಲೆಯ ಸನ್ನತಿ, ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಹಾಗೂ ಕೋಲಾರ ಜಿಲ್ಲೆಯ ಕೆಲವು ಭಾಗಗಳು, ಚಂದ್ರವಳ್ಳಿಯಲ್ಲಿ ಉತ್ಖನನ ನಡೆಸಿದ ಎಂ.ಎಚ್.ಕೃಷ್ಣ ಅವರು "ಅಲ್ಲಿ ಇತರ ಪೌರಾಣಿಕ ದೇವತೆಗಳಲ್ಲದೆ ಬುದ್ಧನ ಪೂಜೆಯೂ ನಡೆಯುತ್ತಿತ್ತು" ಎನ್ನುತ್ತಾರೆ. ಅಲ್ಲಿ ಚೈತ್ಯಾಲಯ ಚಿತ್ರ ಬೋಧಿ ವೃಕ್ಷದ ಚಿತ್ರಗಳಿರುವ ನಾಣ್ಯಗಳು ದೊರಕಿವೆ. ಶಾತವಾಹನರ ಕಾಲದಲ್ಲಿ ಬೌದ್ಧ ವಿಹಾರವಾಗಿದ್ದ ಗುಲ್ಬರ್ಗಾ ಜಿಲ್ಲೆಯ ಸನ್ನತಿಯ ಬಗೆಗೆ ಕೆಲವು ಬರವಣಿಗೆಗಳು ಬಂದಿವೆ. ಸನ್ನತಿ ಪ್ರಾಚೀನ ಕಾಲದ ಬೌದ್ಧ ಕೇಂದ್ರವಾಗಿತ್ತು.

ಪುರಾತತ್ವ ಇಲಾಖೆಯವರು ಇಲ್ಲಿ ಶೋಧಿಸಿ ಅಮೂಲ್ಯವಾದ ಮಾಹಿತಿ ಸಂಗ್ರಹಿಸಿದ್ದಾರೆ. ಸನ್ನತಿಯ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿನಲ್ಲಿ ಭೀಮಾನದಿಯ ಎಡದಂಡೆಯಲ್ಲಿ ಬೌದ್ಧ ಸ್ಮಾರಕಗಳು ಕಂಡುಬಂದಿವೆ. ನದಿಯ ಎರಡು ದಡದ ಉದ್ದಕ್ಕು ಎರಡು ಮೈಲಗಳ ವಿಸ್ತಾರಕ್ಕೆ ಸನ್ನತಿಯಿಂದ ಕಣಗನ ಹಳ್ಳಿಯವರೆಗೂ ಸನ್ನತಿಯು ವ್ಯಾಪಿಸಿತ್ತು ಎಂದು ಹೇಳಿದ್ದಾರೆ. ಗಂಗರು ದಕ್ಷಿಣ ಕರ್ನಾಟಕ ಭಾಗದಲ್ಲಿ ತಲಕಾಡನ್ನು ಕೇಂದ್ರವಾಗಿಸಿಕೊಂಡು ಆಳುತ್ತಿದ್ದರೆಂದು, ಈ ವಂಶದ ೨ನೆಯ ಮಾಧವನ ತಾಮ್ರಪಟವೊಂದು ದೃಢಪಡಿಸುತ್ತದೆ. ಇದರ ಕಾಲ ಕ್ರಿ.ಶ. ೪೦೦ ಎಂದು ನಿರ್ಧರಿಸಲಾಗಿದೆ. ಪುರಾತತ್ವ ಇಲಾಖೆಯವರು ಕ್ರಿ.ಶ. ೧೯೧೦ನೆಯ ವರ್ಷದ ವರದಿಯಲ್ಲಿ ಉಲ್ಲೇಖ ಮಾಡಿದ್ದಾರೆ. ಮತ್ತು ಶಾಸನವೊಂದು ಸಿಕ್ಕಿದೆ. ಈ ಶಾಸನದಲ್ಲಿ 'ಬೌದ್ಧಸತ್ವ' ಎಂಬಾತನಿಗೆ ದಾನಕೊಟ್ಟ ವಿಚಾರ ಇದೆ. ಚಲುಕ್ಯ ಇಮ್ಮಡಿ ಪುಲಕೇಶಿಯ ರಾಜಧಾನಿಯಾದ ಬಾದಾಮಿಯಲ್ಲಿಯೂ ಕೂಡಾ ಬೌದ್ಧಾಲಯಗಳಿದ್ದವು ಎಂಬುದಾಗಿ ಹೊಯಾನ ತ್ಸಾಂಗ್ ಹೇಳುತ್ತಾನೆ. ಮತ್ತು ಇತ್ತಿತ್ತಿಗ ಪ್ರವಾಸಿ ಲೇಖನದಲ್ಲಿಯೂ ಪುಲಕೇಶಿಯ ಪ್ರಸ್ತಾಪವಿದ್ದು ಉತ್ತರ ಭಾರತದ ಗಡಿಯಾಚೆಗೂ ಬೌದ್ಧ ವಿಹಾರವೊಂದನ್ನು ರಾಜನ ಬೆಂಬಲದಿಂದ ನಿರ್ಮಿಸಿದ ಅಂಶವನ್ನು ಹೇಳುತ್ತಾರೆ. ಬಾದಾಮಿಯ ಗುಹೆಗಳನ್ನು ಮೆಣಬಸದಿ ಮಯಣದ ಬಸದಿ ಎಂಬುದಾಗಿ ಹೇಳುತ್ತಾರಷ್ಟೆ. ಇವುಗಳು ಪ್ರಾಚೀನ ಕಾಲದಲ್ಲಿ ಬೌದ್ಧಾಲಯಗಳಾಗಿದ್ದವು ಎಂದು

ತಿಳಿಸುತ್ತಾರೆ. ಈಚೆಗೆ ಹಂಪಿಯಲ್ಲಿ ಪುರಾತತ್ತ್ವ ಶೋಧ ನಡೆಸಿದ ಸಂದರ್ಭದಲ್ಲಿ ಕೆಲವು ಬೌದ್ಧ ಅಂಶಗಳು ಬೆಳಕಿಗೆ ಬಂದಿದೆ. ಅಲ್ಲಿನ ರಾಜವಾಡೆಯ ಎಡಪಕ್ಕದ ಕೋಟೆಯ ಗೋಡೆ ಬದಿಯ ಬುದ್ಧನ ಜೀವನವನ್ನು ಪ್ರತಿಬಿಂಬಿಸುವ ಕೆತ್ತನೆಗಳು ಕಂಡುಬರುತ್ತವೆ. ಕೊಪ್ಪಳವು ಇಲ್ಲಿಗೆ ಸಮೀಪವೇ ಇದ್ದುದಾಗಿ ಅಲ್ಲಿಯ ಬೌದ್ಧರ ಪ್ರಭಾವ ಇಲ್ಲಿಯವರೆಗೂ ವ್ಯಾಪಿಸಿರುವ ಸಾಧ್ಯತೆ ಇದೆ. ಮಂಗಳೂರಿನ ಕದರಿಯ ಪ್ರಾಚೀನ ಬೌದ್ಧನೆಲೆ ಎಂಬುದಕ್ಕೆ ಆಧಾರಗಳಿವೆ. ಅಲ್ಲಿಯ ಮಂಜುನಾಥ ದೇವಾಲಯದ ಒಳಪ್ರಕಾರದಲ್ಲಿ ಪೂರ್ವಕ್ಕೆ ಇರುವ ಶಿಥಿಲವಾದ ಒಂದು ಶಿಲಾಸ್ತಂಭವು 'ಆಯಕ' ಸ್ತಂಭಗಳನ್ನು ಹೋಲುತ್ತದೆ. ಇದರ ತುದಿಯಲ್ಲಿ ನಾಲ್ಕು ಬದಿಗಳ ಜ್ಞಾನದ ಬುದ್ಧನ ಕೆತ್ತನೆಯಿದೆ. ಪ್ರಾಚೀನ ಕಾಲದಲ್ಲಿ ಇದೊಂದು ಬೌದ್ಧ ನೆಲೆಯಿದ್ದಿರಬೇಕೆನಿಸುತ್ತದೆ. ಚಾಲುಕ್ಯ ಚಕ್ರವರ್ತಿಯ ಒಪ್ಪಿಗೆಯಂತೆ ದಾನ ನಡೆದಿದೆ. ಚಾಲುಕ್ಯ ಚಕ್ರವರ್ತಿಗಳ ಬೌದ್ಧ ಸಹಿಷ್ಣುಗಳಾಗಿದ್ದರು. ಎಂಬುದನ್ನು ತಾರಾಭಗವತಿ ಹಾಗೂ ಲೋಕೇಶ್ವರ ಮತ್ತು ಉಲ್ಲೇಖಗಳಿರುವುದರಿಂದ ತಾಂತ್ರಿಕ ಬೌದ್ಧ ಕೇಂದ್ರವೆಂದೂ ಸಿದ್ಧವಾಗುತ್ತದೆ. ಅದೇ ಸ್ಥಳದ ಇನ್ನೊಂದು ಶಾಸನ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲನ ಸಹವಾಸಿಯಾದ ಹಂಪಭಟನ ಪತ್ನಿ ನಾಗಿಯಕ್ಕ ಎಂಬಾಕೆ ಬಳ್ಳಿಗಾವೆಯಲ್ಲಿ ತಾರಾಭಗವತಿಯ ದೇಗುಲ ನಿರ್ಮಿಸಿ ಬೌದ್ಧ ಬಳಾರರ ಕಾಲಂಕರ್ಚಿ ಧಾರಾಪೂರ್ವಕವಾಗಿ ಭೂದಾನ ಮಾಡಿದ ಉಲ್ಲೇಖವಿದೆ. ಇನ್ನೊಂದು ಮುಖ್ಯವಾದ ಅಂಶವೆಂದರೆ ಕೆಲವು ಕನ್ನಡ ಶಾಸನಗಳಲ್ಲಿ ಉಲ್ಲೇಖಗೊಂಡ ಬಳ್ಳಿಗಾವೆಯ ಸಮೀಪದ ಪುಲ್ಲೆಯ ಬಯಲ್ ಎಂಬ ಸ್ಥಳ ಬೌದ್ಧರಿಗೆ ಪ್ರಿಯವಾದ ಮೃಗದಾಮ ಕಾಶಿಯ ಮೃಗದಾಮ ಪ್ರಸಿದ್ಧ ಬೌದ್ಧಕ್ಷೇತ್ರ ಆಗಿದ್ದಿತೆಂಬ ಊಹೆಯನ್ನು ಹಯವದನರಾಯರು ಮಾಡಿದ್ದಾರೆ.[೬] ಡಂಬಳ ಶಾಸನವು ಕ್ರಿ.ಶ. ೧೦೯೫ಕ್ಕೆ ಸೇರಿದುದಾಗಿದೆ. ಇದು ಜೈನ ಶಾಸನವಾಗಿತ್ತೆಂದು ಇದರ ಸಂಪಾದಕರಾದ ಫ್ಲಿಟರು ಭಾವಿಸಿದ್ದರು.[೧೨] ಬಳಿಕ ಬರ್ಗೆಸ್ ಸಾಧಾರವಾಗಿ ಇದನ್ನು ಅಲ್ಲಗಳೆದು ಇದೊಂದು ಬೌದ್ಧ ಶಾಸನ ಎಂಬುದಾಗಿ ಶ್ರುತಪಡಿಸಿದರು.[೧೩]

### ಜೈನಧರ್ಮ

ಪ್ರಾಚೀನ ಕರ್ನಾಟಕಲ್ಲಿ ಜೈನಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು. ಆ ಧರ್ಮದ ತಿರುಳನ್ನು ಹೀಗೆ ಸಂಗ್ರಹಿಸಬಹುದು. ಆತ್ಮವು ತನ್ನ ಸಹಜ ಶುದ್ಧತೆಯನ್ನು ಪಡೆದುಕೊಂಡು ಕೇವಲ ಜ್ಞಾನವನ್ನು ಪಡೆಯುವುದು ಜೀವನದ ಗುರಿ. ಅದೊಂದು ಅಲೌಕಿಕ ಸ್ಥಿತಿ ಆತ್ಮವು ಆಗ ಎಲ್ಲ ಪೂರ್ಣತೆಗಳನ್ನು ಹೊಂದಿರುತ್ತದೆ. ಅನಂತರ ಜ್ಞಾನ ಮಾತ್ರವಲ್ಲ ಅನಂತರ ಶಾಲೆ ಅನಂತರ ಶಕ್ತಿಯನ್ನು ಹೊಂದಿರುತ್ತದೆ. ಉಪನಿಷತ್ತಿನ ಬೋಧನೆಯ ಹಾಗೆಯೇ ಇಲ್ಲಿಯೂ ಮೋಕ್ಷವೆಂದರೆ ಪುಣ್ಯಪಾಪಗಳನ್ನು ಮೀರಿ ನಿಲ್ಲುವುದು. ಸ್ಥಿತಿಯನ್ನು ಪಡೆಯಲು ತ್ರಿಮುಖವಾದ ಸಾಧನೆ ಅವಶ್ಯಕ. ಜೈನರು ಕನ್ನಡ ಜಾನಪದಕ್ಕೆ ಚೈತಾಯಾತ್ರೆಗಳನ್ನು ಕೈಗೊಂಡ ಮೇಲೆ ಕರ್ನಾಟಕದಲ್ಲಿ ಬೌದ್ಧಧರ್ಮ ತನ್ನ ಅವನತಿಯನ್ನು ಕಳೆದುಕೊಂಡಿತ್ತು. ಸನತಿ, ಕೊಪ್ಪಳ ಮುಂತಾದ ಬೌದ್ಧಕೇಂದ್ರಗಳು ಜೈನಕೇಂದ್ರಗಳಾಗಿ ಪರಿವರ್ತನೆಗೊಂಡವು ಜೈನ ಸಾಹಿತ್ಯ ಪ್ರಾಕೃತದಾಚೆಗೆ ಬಂದು ಕನ್ನಡವನ್ನು ತಲುಪಿತ್ತು. ಬೌದ್ಧ ಬಿಕ್ಷುಗಳು ನೇರವಾಗಿ ಕಾರಣರಾದರು. ಚೈತ್ಯಾಲಯಗಳಲ್ಲಿ ನಡೆದ ವಿಪರೀತ ಅಸಂಗತ ಕೃತ್ಯಗಳ ಬೌದ್ಧಧರ್ಮ ಕರ್ನಾಟಕದಲ್ಲಿ ತನ್ನ ನೆಲಗಟ್ಟನ್ನು ಕಳೆದುಕೊಂಡಿತ್ತು. ಅಶೋಕನು ಕರ್ನಾಟಕದಲ್ಲಿ ಭೂಭಾಗವನ್ನು ಒಂದು ಬೌದ್ಧ ಧರ್ಮದ ಜನಪ್ರಿಯನಾಡನಾಗಿ ಪರಿವರ್ತಿಸಲು ಆಸಕ್ತಿಯನ್ನು ವಹಿಸಿದನು. ಭಾರತದ ಭೂ ಭಾಗದ

ಒಳಗಿರುವ ಕರ್ನಾಟಕದ ಪ್ರದೇಶವನ್ನು ಬೌದ್ಧಧರ್ಮದ ಪ್ರದೇಶವನ್ನಾಗಿ ಮಾರ್ಪಡಿಸಲು ಅನೇಕ ಧರ್ಮಾಧಿಕಾರಿಗಳನ್ನು ನೆಲೆಗೊಳಿಸಲು ಕೊಪ್ಪಳವು ಇಂಥ ನೆಲೆಗಳಿಗೆ ಕೇಂದ್ರಬಿಂದುವನ್ನಾಗಿ ಕೆಲಸಮಾಡುತ್ತಿದ್ದ ಕೊಪ್ಪಳದ ಪರಿಸರ ಸೂಕ್ತ ಬೌದ್ಧಧರ್ಮ ಬೆಳೆಯತೊಡಗಿತ್ತು. ಆದರೆ ಜೈನರ ಲೋಕಪ್ರಿಯತೆ ಮತ್ತು ಸಾಹಿತ್ಯದ ಬಗೆಗಿನ ಆಸಕ್ತಿಗಳು ಬಹು ಬೇಗ ಕನ್ನಡಿಗರ ಮನಸ್ಸನ್ನು ಆಕರ್ಷಿಸುವುದು ಜೈನರಲ್ಲಿ ದಿಗಂಬರ ಜೈನರು ಕರ್ನಾಟಕದಲ್ಲಿ ಹೆಚ್ಚು ನೆಲೆಗೊಂಡರು. ಜೈನಧರ್ಮವನ್ನು ವೈಷ್ಣವ ಧರ್ಮದ ತಳಹದಿಯಲ್ಲಿ ಕಟ್ಟಲ್ಲು ಪ್ರಯತ್ನಿಸಿದರು. ಮಹಾವೀರನ ತತ್ವವನ್ನು ವೈದಿಕಧರ್ಮದ ಕ್ರಿಯಾ ವಿಚಾರಗಳ ಮೂಲಕ ಪ್ರತಿಪಾದಿಸತೊಡಗಿದರು. ಮಾತ್ರವಲ್ಲ ಜೈನ ಬ್ರಾಹ್ಮಣರೆಂದೇ ಕರೆದುಕೊಂಡರು. ಕ್ರಿ.ಶ. ೨ ಮತ್ತು ೩ನೆಯ ಶತಮಾನದ ೧೨, ೧೩ ಶತಮಾನದವರೆಗೆ ಜೈನಧರ್ಮ ಕರ್ನಾಟಕದಲ್ಲಿ ಒಂದು ಉತ್ಕೃಷ್ಟ ನೆಲೆಗೊಂಡಿತು.

ಮಾದತ್ತೆತಿ ವಿಶದ ಯಶೋಧಾಮ ಮಾದತ್ತು ವಿದ್ಯಾ ಧನ ಜನ್ಮಸ್ನಾ ಮಾದತ್ತಾಮತರಳ ಗೋವ ಸದಹ.. ತ್ತೆನಿಸಲಿಂತುಳ್ಳ ನಾನಾ ಮಹಿಮೆಯೊಳೆಸಗುಂ ಚಾರುಕಣಾರು ವೆದ. ಎಂದು'' ತಿಳಿಸಿವೆ. ಸತ್ಯ ಕರ್ನಾಟಕದಲ್ಲಿ ಜೈನಧರ್ಮವು ಕ್ರಿ.ಪೂ ದಿಂದ ಪ್ರಚಲಿತದಲ್ಲಿತ್ತು. ದಿಗಂಬರ ಸಂಪ್ರದಾಯಕ್ಕೆ ಕರ್ನಾಟಕವು ಮುಖ್ಯ ಕೇಂದ್ರವಾಗಿದೆ. ಇದಕ್ಕೆ ಉತ್ತರ ಭಾರತದಿಂದ ಭದ್ರಬಾಹು ಗುರುವು ತನ್ನ ಸಂಘ ಸಹಿತ ಚಂದ್ರಗುಪ್ತಾ ಮೌರ್ಯರಾಜನೊಡನೆ ಕರ್ನಾಟಕದ ಕಟವಪ್ರ ಈಗಿನ ಶ್ರವಣ ಬೆಳಗೋಳಕ್ಕೆ ಬಂದು ನೆಲೆಸಿದಕ್ಕೆ ಸಾಕ್ಷಿಯಾಗಿದೆ. ಈ ಪ್ರದೇಶವನ್ನು ಮೌರ್ಯರು, ಶಾತವಾಹನರು, ಕದಂಬರು, ಪಲ್ಲವರು, ಆಳಿದರು ಅವರ ಧರ್ಮವು ಜೈನಧರ್ಮವಾಗಿದ್ದಿತು. ೧೯೨೨ - ೨೩ರ ಎಫಿಗ್ರಾಫಿ ರಿಪೋರ್ಟ್‌ನಲ್ಲಿ "ಬನವಾಸಿ ಪ್ರಾಚೀನ ಕದಂಬರು, ಚಾಲುಕ್ಯರು, ಪಲ್ಲವರು ನಂತರ ತುಳುವ ದೇಶದ ಮೆಲೆ ರಾಜ್ಯ ಆಳ್ವಿಕೆ ಮಾಡಿದರು. ನಿಸ್ಸಂದೇಹವಾಗಿ ಜೈನರಿದ್ದರೆಂದು ಗೊತ್ತಾಗುತ್ತದೆ ಎಂದಿದ್ದಾರೆ."

**ಗಂಗರ ಕಾಲದಲ್ಲಿ ಜೈನಧರ್ಮ :**

ಮೌರ್ಯರ ನಂತರ ಕನ್ನಡ ನಾಡಿನಲ್ಲಿ ಜೈನಧರ್ಮವನ್ನು ಮುಂದುವರಿಸುವ ಜವಾಬ್ದಾರಿ ಗಂಗರ ಮೇಲೆ ಬಿತ್ತು. ಗಂಗರ ಮೊಟ್ಟ ಮೊದಲಿನ ಐತಿಹಾಸಿಕ ಪುರುಷರು ಮಾಧವ ಮತ್ತು ದಡಿಗ, ಇವರ ತಂದೆ ಪದ್ಮನಾಭ ಇವರು ಕಡಪ ಜಿಲ್ಲೆಯ ಗಂಗ ಪೆರೂರಿನವರಾಗಿದ್ದು. ಜೈನಾಚಾರ್ಯ ಸಿಂಹನಂದಿಯುಇವರ ಗುರುವಾಗಿದ್ದನು. ದುರ್ವಿನೀತನ ಕಾಲ ಕ್ರಿ.ಶ. ೪೮೨ ಇವನು ತಂದೆಯಂತೆ ವಿದ್ಯಾವಂತನಾಗಿದ್ದು. ಜೈನಾಚಾರ್ಯನಾದ ಪೂಜ್ಯ ಪಾದರನ್ನು ಗುರವಾಗಿ ಹೊಂದಿದ್ದನು. ದುರ್ವಿನೀತನ ಮಗ ಮುಷ್ಕರನ ನೆನಪಿಗಾಗಿ ಲಕ್ಷ್ಮೀಶ್ವರದಲ್ಲಿ ಮೊಕ್ಕರ ಬಸದಿಯನ್ನು ಕಟ್ಟಿಸಿದರು. ಮತ್ತು ಮನೆತನದ ೩ನೆಯ ಮಾರಸಿಂಹನ ಜೈನ ಸಿದ್ಧಾಂತಯಾಗಿದ್ದನು. ನಿಜವಾದ ಅನುಯಾಯಿ ಇವನು ವೈಭವದಿಂದ ರಾಜ್ಯವನ್ನು ಕೊನೆಗೆ ಗುರು ಅಜಿತ ಸೇನಾಚಾರ್ಯರ ಬಳಿ ದೀಕ್ಷೆ ತೆಗೆದುಕೊಂಡು ಕ್ರಿ.ಶ ೯೭೫ರಲ್ಲಿ ಸಲ್ಲೇಖನ ವ್ರತದಿಂದ ಬಂಕಾಪುರದಲ್ಲಿ ಪ್ರಾಣತ್ಯಾಗ ಮಾಡಿದನು. ಕೊಪ್ಪಳದ ಶಾಸನವೊಂದರಲ್ಲಿ ಗಂಗವಂಶದ ರಾಣಿಯರು ರಾಜ್ಯ ಕಳೆದುಕೊಂಡು ಒಂದು ಬಗೆಯ ಅಧಿರತ್ವವನ್ನು ಹೊಂದಿದಾಗ ಇಲ್ಲಿದು ಸಲ್ಲೇಖ ವ್ರತ ಹೊಂದಿದನು.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ಶಾಸನವು ಎರೆಯಾಚ್ಚಿ ಮರಣ ಹೊಂದಿದನ್ನು ಉಲ್ಲೇಖಿಸುತ್ತದೆ. ಈ ಎರೆಯಾಚ್ಚೆ ಗಂಗರಾಜನ ಪತ್ನಿಯೆಂದು ಹೇಳಿದೆ. ಈ ಕಾಲದಿಂದ ಈಚೆಗೆ ಪ್ರತ್ಯೇಕವಾಗಿರುವ ಜೈನಧರ್ಮಕ್ಕೆ ಪ್ರೋತ್ಸಾಹ ನೀಡುತ್ತಾ ನೇರವಾಗಿ ಅನುಯಾಯಿಗಳಾಗಿರುತ್ತಾ ಬಂದಿದ್ದಾರೆ. ಕ್ರಿ.ಶ. ೯೬೧ರಲ್ಲಿ ಗಂಗರಾಜ ಬುತುಗ ಮರಣವನ್ನಪ್ಪಿದ ಇವನಿಗೆ ರೇವಣನಿಮ್ಮಡಿ ಪದ್ಮಬ್ಬರಸಿ, ಬಿಜಿರಸಿ ಎಂಬ ಹೆಂಡತಿಯರು ಇದ್ದರು. ಕ್ರಿ.ಶ. ೯೭೩ರ ನಂತರ ಗಂಗವಂಶದ ರಾಣಿವಾಸದ ಬಹಳಷ್ಟು ಜನ ಕೊಪ್ಪಳದಲ್ಲಿ ಮಡಿದಿರುತ್ತಾರೆ. ಕೊಣ್ಡಕುನ್ದಾನ್ವಯದ ದೇಸಿಗಣದ ಗ್ರಂಥರ ವಿಮುಕ್ತ ಭಟಾರರ ಅನ್ವಯಕ್ಕೆ ಸೇರಿದ ಮಲಧಾರಿದೇವ ಕೊಪಣದಲ್ಲಿ ಮುಡಿಪಿದಾಗ ಅವನ ಶಿಷ್ಯ ಪೊಲಯಬ್ಬೆಯು ನಿಸಿಧಿಗೆ ಮಾಡಿಸುತ್ತಾಳೆ.

ಕ್ರಿ.ಶ. ೯೮೯ರಲ್ಲಿ ಗಂಗವಂಶದ ಬಾಸ (ವಾಸವ) ಮತ್ತು ಅವನ ಪತ್ನಿಯಾದ ರಾವಣಬರಸಿ ಇವರ ಮಗಳಾದ ರಂಬಲದೇವಿಯನ್ನು ಅದೀಕ್ಷೆರಿಗೆ ಖೇಚರಿಗೆ ಹೊಲಿಸಲಾಗಿದೆ. ಇವಳ ಗಂಡ ಚಾಲುಕ್ಯ ವಂಶದ ಚಿಕ್ಕಲದೇವ ಚಂದ್ರಭಟ್ಟಾರಕರ ಬಳಿ ಸ್ವೀಕರಿಸಿ ಮುಡಿಪುತ್ತಾಳೆ. ಕ್ರಿ.ಶ.೯೯೨ರಲ್ಲಿ ಗಂಗರಾಜ ಎರೆಗಂಗನ ಮಗಳು ಗೋನಬ್ಬೆ ಮುಡಿಪಿದಳು ಇವಳ ಗಂಡ ಅಂಬವರ್ಮ. ಕ್ರಿ.ಶ. ೯೯೭ರಲ್ಲಿ ಮಳಧಾರಿದೇವನ ಶಿಷ್ಯ ಶ್ರೀಧರಭಟ್ಟಾರಕನು ಸನ್ನಾಸನ ವಿದ್ಯಾಪಿಂದ ಮುಡಿಪೆದ. ಕ್ರಿ.ಶ. ೯೯೮ರಲ್ಲಿ ಬಿತುಗನ ಮಗಳು ಮಾರಸಿಂಹನ ಅಕ್ಕ ಹಾಗೂ ಹರಿಗನ ಪತ್ನಿಯಾದ ಬೆಜ್ಜಬ್ಬರಸಿಯು ಕೊಪ್ಪಳದಲ್ಲಿ ಮುಡಿಪಿದಳೆಂದಿದೆ.

**ರಾಷ್ಟ್ರಕೂಟರು :**

ರಾಷ್ಟ್ರಕೂಟರು ಕ್ರಿ.ಶ. ೭೫೭ - ೯೭೩ರ ವರೆಗಿನ ಕರ್ನಾಟಕ ಹಾಗೂ ಈಗಿನ ಮಹಾರಾಷ್ಟ್ರಗಳಲ್ಲಿ ರಾಜ್ಯವಾಳಿದರು. ಕ್ರಿ.ಶ. ೮೧೫ - ೮೭೭ರ ವರೆಗೆ ಆಳಿದ ಒಂದನೆಯ ಅಮೋಘವರ್ಷನು ಜೈನ ಧರ್ಮದ ಅನುಯಾಯಿಯಾಗಿದ್ದನು. ಜೀನ ಸೇನಾಚಾರ್ಯರು ಇವನ ಗುರುಗಳು ಆಗಿದ್ದರು. ಇವನ ನಂತರ ಇವನ ಮಗ ಎರಡನೆಯ ಕೃಷ್ಣನು ಜೈನವೀರ ಮಹಿಳೆಯಾದ ಜಕ್ಕಿಯಬ್ಬೆಯು ನಾಗರ ಖಂಡವನ್ನಾಳಿದಳು. ಇವರ ನಂತರ ಬಂದವರು ಜೈನ ದೀಕ್ಷೆಯನ್ನು ಸ್ವೀಕರಿಸಿ ಶ್ರವಣಬೆಳಗೋಳಕ್ಕೆ ಹೋಗಿ ೯೮೪ರಲ್ಲಿ ಸಮಾಧಿ ವಿಧಾನದಿಂದ ಪ್ರಾಣವನ್ನು ಬಿಟ್ಟರು. ಕ್ರಿ.ಶ. ೮೮೩ ಇಂದ್ರರಾಜನ ದಂಡನಾಥ ಮಾಮರಸನೆಂಬುವನು ಸಿದ್ದಕುಪಣಕ್ಕೆ ತೀರ್ಥವಂದನಾರ್ಥವಾಗಿ ಬಂದಿದ್ದಾಗ ಕದಂಬರ ಪೆರ್ಮದೇವನೆಂಬುವನು ದಡಿಯ ಮರಸ ಮಾಡಿಸಿದ ಬಸದಿಗೆ ಕಳಸವನ್ನಿಟ್ಟ ಸಂಗತಿ ತಿಳಿದುಬರುತ್ತದೆ.

ಕ್ರಿ.ಶ. ೯೧೭ರ ಶಾಸನವೊಂದರಲ್ಲಿ ಕಾನೂರಗುಣದ ಉಲ್ಲೇಖ ಬರುತ್ತದೆಯಾದರೂ ವಿವರಗಳಿಲ್ಲ ಕ್ರಿ.ಶ. ೯೧೫ರಲ್ಲಿ ಪದ್ಮ ನಂದಿಸಿದ್ಧಾಂತನ ಶಿಷ್ಯ... ಭದ್ರ ಪಂಡಿತಭಟರನ ನಿಸಿಧಿಗೆಯ ಉಲ್ಲೇಖವಿದೆ. ರಾಷ್ಟ್ರಕೂಟ ಮುಮ್ಮಡಿ ದೊರೆ ಕೃಷ್ಣ ಆಳುತ್ತಿದ್ದಾಗ ೯೬೪ರಲ್ಲಿ ಯಾದವ ವಂಶದ ಶಂಕರಗಂಡನು ತನ್ನ ಹೆಸರಿನಲ್ಲಿ ಜಯಧೀರ ಜಿನಾಲಯವನ್ನು ಕುಪಣದಲ್ಲಿ ಮಾಡಿಸುತ್ತಾನೆ.ಇವನು ಮಾಡಿಸಿದ ಬಸದಿಗೆ ಇವನ ಮಾಂಡಳಿಕ ಕೃತಯುಗಗಳ್ಳ ಚಾಲುಕ್ಯವಂಶದ ಮಿಟ್ಟಯ್ಯನು ಸರಸ್ವತಿಗಣದ ನಾಗನಂದಿ ಪಂಡಿತಭಟಾಚಾರ್ಯ ಕಾಲನ್ನು ತೊಳೆದು ದಾನ ನೀಡುತ್ತಾನೆ. ಕ್ರಿ.ಶ. ೯೬೯ ಗಂಗಮಾರ ಸಿಂಹನ ಅಕ್ಕ

ಕುಂದಣಸೊಮಿ ಎಂಬಾಕೆ ಕಾಳಪಾರ್ಯ ಎಂಬುವವನಿಗೆ ಧವಳ ವಿಷಯದಲ್ಲಿದ್ದ ಅಡ್ಡಉರಗೆ ಎಂಬ ಗ್ರಾಮವನ್ನು ನೀಡುತ್ತಾರೆ. ಕುಂದಣಸೊಮಿಯು ಜೈನಧರ್ಮದವಳಾಗಿದ್ದು ಈಕೆ ಮಾಡಿಸಿದ ಜಿನಪ್ರತಿಮೆಗಳು ಹಾಸನಜಿಲ್ಲೆಯ ಬಾಳು ಎಂಬ ಗ್ರಾಮದಲ್ಲಿ ದೊರೆತಿವೆ. ಎರೆಯಬ್ಬೆ ಮರಣ ಹೊಂದಿದ್ದನು ಉಲ್ಲೇಖಿಸುತ್ತಾನೆ. ಎರೆಯಬ್ಬೆ ಗಂಗರಾಜನ ಪತ್ನಿಯೆಂದು ಹೇಳುತ್ತದೆ. ಕ್ರಿ.ಶ.೯೭೪ರಲ್ಲಿ ಸೆನಗಣಕ್ಕೆ ಸೇರಿದ ಬುದ್ಧಸೇನ ಪಂಡಿತನ ಶಿಷ್ಯ ಸಾಧುಸೇನ ಪಂಡಿತನು ರಾಜ ಪೂಜಿತನಾಗಿ ಕೆಲವು ಕಾಲ ಕುಪಣದಲ್ಲಿದ್ದು ಮುಂದೆ ಮಾನ್ಯಖೇಟದ ಏಕಚಟ್ಟುಗದ ಬಸದಿಯಲ್ಲಿ ಸಮಾಧಿ ಕೂಡಿದ ಸಾಧುಸೇನ ಪಂಡಿತನ ಶಿಷ್ಯ ಸಿದ್ಧಸೇನ ಪಂಡತನು ತನ್ನ ಗುರುವಿನ ನೆನಪಿನಲ್ಲ ಇನಿಸಿಧಿಯನ್ನು ಮಾಡಿದ ಉಲ್ಲೇಖ ಶಾಸನದಲ್ಲಿ ಬರುತ್ತದೆ.

**ಚಾಲುಕ್ಯರು :**

ಕ್ರಿ.ಶ. ೬೦೯ರಲ್ಲಿ ಪಟ್ಟಕ್ಕೆ ಬಂದ ಎರಡನೆಯ ಪುಲಕೇಶಿಯ ಗುರು ಜೈನಾಚಾರ್ಯನಾದ ರವಿಕೀರ್ತಿಯಾಗಿದ್ದನು. ಆದ್ದರಿಂದ ಇವನು ಒಂದು ಜೈನ ಮಂದಿರವನ್ನು ಕಟ್ಟಿಸಿದನು. ಕ್ರಿ.ಶ. ೬೬೫ರಲ್ಲಿ ಒಂದನೆಯ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದನು. ಇವನ ಮಗ ವಿನಯಾದಿತ್ಯನಿಗೆ ಜೈನಪಂಡಿತ ನಿವರದ್ಯದೇವನು ಧರ್ಮಗುರುವಾಗಿದ್ದನ್ನು. ಜಿನಬಸದಿಯನ್ನು ಜೀರ್ಣೋದ್ಧಾರ ಮಾಡಿ ಸುಪ್ರಸಿದ್ಧ ವಿವಾದಪಟು ಪಂಡಿತ ವಿಜಯನಿಗೆ ಒಂದು ಊರನ್ನು ಕಾಣಿಕೆಯಾಗಿ ಕೊಟ್ಟದ್ದು ಶಿಲಾಲೇಖನದಿಂದ ತಿಳಿದುಬರುತ್ತದೆ. ಗುಲ್ಬರ್ಗಾ ಜಿಲ್ಲೆಯ ಇಂಗಳಿಗೆ ಶಿಲಾಶಾಸನದಲ್ಲಿ ಜಾಕಲದೇವಿಯು ಎರಡು ಜಿನ ಮಂದಿರಗಳನ್ನು ಕಟ್ಟಿಸಿದಂತೆ ತಿಳಿಯುತ್ತದೆ. ಗಂಗಾವತಿ ತಾಲೂಕಿನ ಆನೆಗೊಂದಿ ಗ್ರಾಮದ ಶಾಸನವೊಂದರಲ್ಲಿ ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲನು (೧ನೆಯ ಸೋಮೇಶ್ವರ) ದಾನ ನೀಡಿ ಜಯ ಘೋಷಿಸಿರಬಹುದು ಎಂದು ಹೇಳಬಹುದು. ಹೀಗೆ ಚಾಲುಕ್ಯರು ಜೈನಧರ್ಮಕ್ಕೆ ಪೋಷಕರಾಗಿದ್ದರೆಂಬುದನ್ನು ಬೆಳಗಾವಿ, ರಾಯಭಾಗ, ತೇರದಾಳ, ಡಂಬಳ, ಗಂಗಾವತಿಯಲ್ಲಿ ದೊರೆತ ಶಾಸನಗೆ ಸಾಕ್ಷಿಯಾಗಿವೆ.

**ಹೊಯ್ಸಳರು :**

ಗಂಗರ ಅವನತಿಯಿಂದ ಜೈನಧರ್ಮಕ್ಕೆ ಉಂಟಾದ ಹಾನಿಯನ್ನು ಮುಂದೆ ಬಂದ ಹೊಯ್ಸಳರು ತುಂಬಿಕೊಟ್ಟರು. ಹೊಯ್ಸಳರು ಅಚ್ಚಕನ್ನಡಿಗರಾಗಿದ್ದು ಯಾದವ ವಂಶಕ್ಕೆ ಸೇರಿದವರಾಗಿ ಸಕಲೇಶಪುರ ತಾಲೂಕಿನ ಈಗಿನ ಅಂಗಡಿ ಗ್ರಾಮ ಆಗ (ಸೊಸೆವೂರು)ದಿಂದ ಬಂದವರು. ಈ ವಂಶದ ಮೂಲ ಪುರುಷನ ಪೊಯ್ಸಳನು ಜೈನಮುನಿ ಸುದಾತ್ರಚಾರ್ಯರಿಂದ ವಿದ್ಯೆ ಕಲಿತನು.

ಸೆಳನ ತರುವಾಯ ೧೦೦೨ರಲ್ಲಿ ೧ನೆಯ ವಿನಯಾದಿತ್ಯ ನಂತರ ನೃಪಕಾಮ ಆಳಿದನು. ಮೂರನೆಯ ವಿನಯಾದಿತ್ಯನು ಜೈನಾಚಾರ್ಯ ಶಾಂತಿದೇವ ಮುನಿಯ ಆಶೀರ್ವಾದದಿಂದ ಗಂಗವಾಡಿ ೯೬೦೦೦ದ ಮಹಾ ಮಂಡಲೇಶ್ವರನಾದನು ಇವನು ಅನೇಕ ಜೈನ ಮಂದಿಗಳನ್ನು ಕಟ್ಟಿಸಿದನು.

ಎರಡನೆಯ ವೀರಬಲ್ಲಾಳನೂ ತನ್ನ ತಂದೆಕೊಟ್ಟ ದಾನಗಳನ್ನು ಹುಲ್ಲನ ವಿನಂತಿಯ ಮೇರೆಗೆ ಮುಂದುವರಿಸಿದನು ಮತ್ತು ಮಂದಿರದ ಪೂಜೆಗಾಗಿ ಮಾಸ್ತ್ರ ಹಳ್ಳಿಯನ್ನು ಹೊಸದಾಗಿ ದಾನ ಕೊಟ್ಟನು.

ಹುಲ್ಲನು ಬಂಕಾಪುರದ ಜನಿಮಂದಿರವನ್ನು ಜೀರ್ಣೋದ್ಧಾರ ಮಾಡಿದನು. ಕೊಪ್ಪಳದ ಜೈನಚಾರ್ಯರ ಉಪಜೀವನಕ್ಕಾಗಿ ಅನೇಕ ಭೂದಾನಗಳನ್ನು ಕೊಟ್ಟನು. ಕೊಪ್ಪಳದ ಶಾಸನಗಳಲ್ಲಿ ಗೌರಾದೇವಿಯರ ಹಡಪದ ಲಖಾರ್ಯನು ಸಾತಲದೇವಿಯ ಬಸದಿಗೆ ೧೨೦ ಮಹಾಜನರ ಕೈಯಿಂದ ದಾನ ನೀಡಿದನು. ಹೀಗೆ ದಾನ ನೀಡುವಾಗ ಕೊಪ್ಪಳದಲ್ಲಿದ್ದ ಇತರೆ ಬಸದಿಗಳಾದ ಅರಸಿಯ ಬಸದಿ, ತೀರ್ಥಬಸದಿ, ತಿಂಮ್ಮಬ್ಬರಸಿ ಬಸದಿಯನ್ನು ಹೆಸರಿಸುತ್ತಾನೆ. ಇರಬಹುದೆಂದು ವಿದ್ವಾಂಸರ ಅಭಿಪ್ರಾಯವಿದೆ.

**ವಿಜಯನಗರ ಸಾಮ್ರಾಜ್ಯ :**

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಹರಿಹರನು ಮುಖ್ಯ ಪಾತ್ರವಹಿಸಿದ್ದನು. ಹರಿಹರನ ನಂತರ ಆಳಿದ ತಮ್ಮ ಬುಕ್ಕರಾಜನ ಆಳ್ವಿಕೆಯ ಕಾಲದಲ್ಲಿ ದಂಡನಾಯಕ, ಮುಂಡಪ್ಪ, ಮಲ್ಲಪ್ಪ, ಇಚಪ್ಪ ಅವನ ಮಗ ಬೈರುಗಪ್ಪ ಮೊದಲಾದವರು ಜೈನ ವೀರರು ಅಧಿಕಾರ ಸ್ಥಾನದಲ್ಲಿದ್ದರು. ಗಂಗಾವತಿ ತಾಲೂಕಿನ ಆನೆಗೊಂದಿ ಶಾಸನವೊದರಲ್ಲಿ "ಬುಕ್ಕರಾಯ ಆಳ್ವಿಕೆ ಕಾಲದಲ್ಲಿ ಬುಕ್ಕರಾಯನ ಮಗ ಹರಿಹರನ ದಂಡನಾಯಕನಾದ ಬೈಚದಂಡನಾಯಕನ ಮಗ ಇರುಗಪ್ಪನು ಶಿಲಾಚೈತ್ಯಾಲಯ ನಿರ್ಮಿಸುತ್ತಾನೆ. ಇದಕ್ಕೆ ಬೈಚದಂಡನಾಯಕನು ದಾನ ನೀಡಿದ್ದನ್ನು ಎಂದು ಉಲ್ಲೇಖವಿದೆ.[೧೫] ಹಣವಾಳ ಶಾಸನವೊಂದರಲ್ಲಿ ಶಾಸನವು ತ್ರುಟಿತವಾಗಿದ್ದು ರಾಜನ ಹೆಸರು ಕಂಡುಬರುವುದಿಲ್ಲ. ಜಿನಾಲಯವನ್ನು ಪುನಃ ನಿರ್ಮಾಣ ಮಾಡಿದ ವಿಷಯ ತಿಳಿಸುತ್ತದೆ.[೧೬] ಇರುಗಪ್ಪನು ಪ್ರಸಿದ್ಧ ಜೈನನೂ, ೨ನೆಯ ಹರಿಹರನ ಮುಖ್ಯಮಂತ್ರಿಯೂ ಸೇನಾಪತಿಯೂ ಆಗಿದ್ದನು. ಜೈನ ಪಂಡಿತಾಚಾರ್ಯನು ಇವನ ಗುರುವಾಗಿದ್ದನು.

ವಿಜಯನಗರದ ಅರಸ ಪ್ರಥಮ ದೇವರಾಯನ ಪತ್ನಿ ಭೀಮಾದೇವಿಯು ಜೈನಳಾಗಿದ್ದಳು. ಅವಳು ಶ್ರವಣಬೆಳಗೊಳದ ಮಂಗಾಯಿ ಬಸದಿಯಲ್ಲಿ ಭಗವಾನ ಶಾಂತಿ ತೀರ್ಥಂಕರ ಪ್ರತಿಷ್ಠೆಯನ್ನು ಮಾಡಿದಳು. ಸಂಗಮ ವಂಶದ ೨ನೆಯ ದೇವರಾಯನು ವಿಜಯನಗರದ ತನ್ನ ನಿವಾಸ ಸ್ಥಾನದಲ್ಲಿ ಪಾರ್ಶ್ವನಾಥ ಮಂದಿರವನ್ನು ೧೪೨೦ರಲ್ಲಿ ಕಟ್ಟಿಸಿದನು.

ಈ ಎಲ್ಲಾ ಏಳುಬೀಳುಗಳ ಮಧ್ಯೆದಲ್ಲಿ ಕರ್ನಾಟಕದಲ್ಲಿ ಜೈನ ಪರಂಪರೆಯ ಉನ್ನತವಾಗಿದ್ದು ರಾಜಕೀಯ ಧಾರ್ಮಿಕ ನೈತಿಕ ಸಾಹಿತ್ಯಿಕ ಸಾಮಾಜಿಕ, ಕ್ಷೇತ್ರಗಳಲ್ಲಿ ಬಹಳಷ್ಟು ಪರಿಣಾಮ ಬೀರಿದೆ ಎಂದರೆ ತಪ್ಪಾಗಲಾರದು. ಶ್ರವಣಬೆಳಗೊಳ, ಕೊಪ್ಪಳ, ಲಕ್ಷ್ಮೇಶ್ವರ, ಇಂಗಳಗಿ, ಮಳಖೇಡ, ಸೆಡಂ, ಬನವಾಸಿ ಹನಸೂಗೆ, ತಲಕಾಡು, ಹೊಂಬುಜ, ಪುಲಿಗೆರೆ, ಮೂಡಬಿದಿರೆ ಮುಂತಾದ ಸ್ಥಳಗಳು ಕೇಂದ್ರಗಳಾಗಿದ್ದು ಧಾರ್ಮಿಕ ಕೇಂದ್ರಗಳೂ ಆಗಿದ್ದವು. ಜೈನಾಚಾರ್ಯರು ಅಂದಿನ ಸಮುದಾಯಕ್ಕೆ ಮಾರ್ಗದರ್ಶಕರಾಗಿದ್ದರು. ಅವರು ಉತ್ತಮ ಸಂಸ್ಕೃತಿಗೆ ಕಾರಣರಾದರು ಇಂತಹ ಭವ್ಯ ಪರಂಪರೆಯನ್ನು ಜೈನಸಂಸ್ಕೃತಿ ಒಳಗೊಂಡಿದ್ದು ಈ ಹಿನ್ನೆಲೆಯಲ್ಲಿ ಕರ್ನಾಟಕ ಜೈನಧರ್ಮವು ಬೆಳವಣಿಗೆ ಹೊಂದಿದೆ.

**ಸಿಸಿಧಿ :**

ಸಿಸಿಧಿ ಅಂದರೆ ಮರಣ ಸಲ್ಲೇಖನ ವ್ರತ್ತವನ್ನು ಅನುಸರಿಸಿ ಸ್ವರ್ಗಕ್ಕೆ ಹೋಗುವುದು ಸಲ್ಲೇಖವ್ರತ ಅಂದರೆ ಉಪವಾಸ ಕೈಗೊಳ್ಳುವುದು.

ಪ್ರಾಚೀನ ಕರ್ನಾಟಕದಲ್ಲಿ ಸಮಾಧಿ ಮರಣವು ಬಹುಜನ ಜೈನರು ಅನುಸರಿಸುತ್ತಿದ್ದ ಆದರ್ಶ ಮರಣವಾಗಿತ್ತು. ರತ್ನಖಂಡಕದ ಪ್ರಕಾರ ಕ್ಷಾಮ ಕಾಲದಲ್ಲಿ ಮುಪ್ಪಿನಲ್ಲಿ ವಾಸಿಯಾಗದ ರೋಗ ಬಂದಾಗ ಅವುಗಳಿಗೆ ಇನ್ನು ಪರಿಹಾರವಿಲ್ಲವೆಂದು ಖಚಿತವಾದರೆ ಧಾರ್ಮಿಕ ವಿಧಿಗಳಿಗುಣವಾಗಿ ಮರಣ ಹೊಂದಿದರೆ. ಸಲ್ಲೇಖನ ಅಥವಾ ಸಮಾಧಿ ಮರಣ ಎನ್ನುತ್ತಾರೆ. ಇಲ್ಲಿ ಯಾವುದೇ ಕ್ಷುದ್ರದೇವತೆಗೆ ಹರಕೆ ಹೊತ್ತು ಉಪವಾಸ ಮಾಡಿ ಸಾಯುವುದು, ವಿಷಪಾನ ಮಾಡಿ ಅಥವಾ ನೀರಲ್ಲಿ ಮುಳುಗಿ ಸಾಯುವುದು, ಇರಿದುಕೊಂಡು ಸಾಯುವುದು ಇವುಗಳನ್ನು 'ಬಾಲಮರಣ'ವೆಂದೂ ಸಲ್ಲೇಖವನ್ನು 'ಪಂಡಿತ ಮರಣ'ವೆಂದು ಕರೆಯುತ್ತಾರೆ.

ಸಮಾಧಿ ಮರಣ ವ್ರತವನ್ನು ಅಂಗೀಕರಿಸಿದವನು ಅನ್ನ ಪಾನಾದಿಗಳನ್ನು ತ್ಯಜಿಸಿ ಎಲ್ಲ ರೀತಿಯ ಸ್ನೇಹ ವೈರ, ಸಂಗಗಳನ್ನು ತ್ಯಜಿಸಿ ತನ್ನ ಕರ್ಮಗಳನ್ನು ಕುರಿತು ಯೋಚಿಸಿ ಪಶ್ಚಾತಾಪ ಪಡುತ್ತಾ ಧ್ಯಾನಿಸುತ್ತ ತನಗೆ ಉತ್ತಮಗತಿ ದೊರೆಯಲೆಂದು ಹಾರೈಸುತ್ತಾ ಪ್ರಾಣತ್ಯಾಗ ಮಾಡುತ್ತಿದ್ದರು. ಜೈನರ ನಂಬಿಕೆಯ ಪ್ರಕಾರ ಕೊನೆಯಗಳಿಗೆಯಲ್ಲಿ ಯಾವ ಭಾವನೆ ಮನಸಿನಲ್ಲಿ ಇರುತ್ತದೋ ಮುಂದೆಯು ಇರುತ್ತದೆ. ಅನುಸರಿಸುತ್ತದೆ. ಅವನ ಮುಂದಿನ ಹುಟ್ಟು ಮನಸ್ಸಿನಲ್ಲಿ ಶುದ್ಧ ಭಾವನೆ ಉದಾತ್ತ ಆಕಾಂಕ್ಷೆಗಳನ್ನು ಮಾಡಿಸುವುದಕ್ಕಾಗಿಯೇ ಈ ವ್ರತವಿರುವುದು.[೧೮] ಈ ವ್ರತದ ಕಷ್ಟಗಳನ್ನು ಸಂತೋಷವಾಗಿ ಸಹಿಸಿಬೇಕು. ಈ ವ್ರತವು ಕತ್ತಿಯ ಅಲಗು ಇದ್ದಂತೆ ಬೆಂಕಿಯಂತೆ, ವಿಷಸರ್ಪದ ಹಲ್ಲಿನಂತೆ ಕಠೋರವಾದದ್ದು ಸಹಿಸಲ ಶಕ್ಯವಾದದ್ದು ಎಂದು ವರ್ಣಿಸಿದೆ. ಆನೆಗೊಂದಿ ಶಾಸನವೊಂದರಲ್ಲಿ ಬುಳ್ಳರಾಜನ ಪತ್ನಿ ಕಾಳುಬಾಯಿ ಸಮ್ಯಕ್ಯವ್ರತ ಆಚರಣೆ ಮಾಡುವುದಕ್ಕಿಂತ ಮುಂಚೆ ಬಾಲಚಂದ್ರ ಯೋಗಿಂದ್ರ ಪಾದಕಮಲಗಳಲ್ಲಿ ದೀಕ್ಷೆ ಪಡೆಯಲು ಇಚ್ಛಿಸಿದಳೆಂದು ತಿಳಿದುಬರುತ್ತದೆ.[೧೯]

ದಿಗಂಬರರ ಪ್ರಕಾರ ಸ್ತ್ರೀಯರಿಗೆ ಈ ಜನ್ಮದಲ್ಲಿ ಮೋಕ್ಷವಿಲ್ಲ. ಅವರು ತಮ್ಮ ಪುಣ್ಯ ಕರ್ಮಗಳಿಂದ ಮುಂದಿನ ಜನ್ಮದಲ್ಲಿ ಪುರುಷರಾಗಿ ಹುಟ್ಟಿದ್ದರೆ. ಮಾತ್ರ ಮೋಕ್ಷವನ್ನು ಸಾಧಿಸಿಕೊಳ್ಳಬಹುದು ಎಂಬ ಭಾವನೆಯಿರುವುದರಿಂದಲೇ ಏನೋ ಸಮಾಧಿ ಮರಣವನ್ನು ಹೊಂದುವ ವಿಷಯದಲ್ಲಿ ಪುರುಷರು ಅಥವಾ ಅವರಿಗಿಂತ ಸ್ವಲ್ಪ ಮಿಗಿಲಾಗಿಯೇ ಸ್ತ್ರೀಯರು ಆಸಕ್ತಿಯನ್ನು ತೋರಿಸಿದ್ದಾರೆ. ಆನೆಗೊಂದಿ ಶಾಸನವೊಂದರಲ್ಲಿ ಹೊನ್ನ ಹಟ್ಟಿಯ ಸಯಿತಿಯ ಮಗಳು ಸೊಯಿಸೆಟ್ಟಿ ನಿಸಿಧಿಯಾದಳೆಂದು ತಿಳಿಸುತ್ತದೆ.[೨೦] ಆನೆಗೊಂದಿ ಶಾಸನವೊಂದರಲ್ಲಿ ಹುಂಚದ ಗೋವಿಸೆಟ್ಟಿಯ ಸೊಸೆ ಸೊವಿಯಕ್ಕ ನಿಸಿಧಿಯಾದಳೆಂದು ಉಲ್ಲೇಖಿಸಿದೆ.[೨೧]

ಈ ವ್ರತವನ್ನು ಮುನಿಗಳಲ್ಲದೆ ಸಂಸಾರಿಗಳಿಂದ ಸ್ತ್ರೀಯರು ಮತ್ತು ಪುರುಷರು ಅಂಗಿಕರಿಸುತ್ತಿದ್ದರು. ಆನೆಗೊಂದಿ ಶಾಸನವೊಂದರಲ್ಲಿ "ಬಲತ್ಕಾರಗಣದ ಧರ್ಮ ಭೂಷಣ ಭಟ್ಟಾರಕರ ಪ್ರಿಯ ಶಿಷ್ಯ ಭೂಷಣ ನಿಸಿಧಿಯಾದ ಬಗ್ಗೆ ಉಲ್ಲೇಖವಿದೆ. ಅದೇ ಊರಿನ ಶಾಸನವೊಂದರಲ್ಲಿ "ಮೂಲಸಂಘ ಬಲತ್ಕಾರಗಣದ ಮದನ ಕೀರ್ತಿರವ್ವಳ ಪ್ರಿಯ ಶಿಷ್ಯ ಬ್ಯೂನರ ಚಿಕ್ಕಣನ ಮಗನಾದ ನಾಗಪ್ಪ ನಿಸಿಧಿಯಾದ ಬಗ್ಗೆ

ಉಲ್ಲೇಖಿವಿದೆ. ಅದೇ ಊರಿನ ಶಾಸನವೊಂದರಲ್ಲಿ "ಮೂಲಸಂಘ ದೇಸಿಗಣದ ನರೇಂದ್ರ ಸೇನ ಪ್ರಿಯ ಶಿಷ್ಯ ಹಾನಿಯ ಲಖ್ಖಿಸೆಟ್ಟಿಯ ಮಗ ಗೋಪಿಸೆಟ್ಟಿ ನಿಸಿಧಿಯಾದ ಬಗ್ಗೆ ಉಲ್ಲೇಖಿವಿದೆ.

**ಶೈವ ಧರ್ಮ :**

ಭಾರತ ಖಂಡದಲ್ಲಿ ಶೈವ ಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು. ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪಾ, ಮಹೆಂಜೋದಾರಗಳ ಶೈವ ಸಂಸ್ಕೃತಿಯಲ್ಲಿ (ಸು.ಕ್ರಿ.ಪೂ. ೩೨೫೦ - ೨೭೫೦) ಕೊಂಬುಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳು ಲಿಂಗಗಳೂ ದೊರಕಿವೆ. ಕೊಂಬುಗಳಿರುವ ದೇವತೆಗೆ ೩ ಮುಖಗಳಿವೆ. ಅವನು ಯೋಗ ಸಮಾಧಿಯ ಭಂಗಿಯಲ್ಲಿ ಕುಳಿತಿದ್ದಾನೆ. ಅವನ ಸುತ್ತಾಮುತ್ತಾ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗ, ಮೃಗ, ಎಮ್ಮೆ ಜಿಂಕೆಗಳ ಚಿಹ್ನೆ ಇದೆ.

ಋಗ್ವೇದದಲ್ಲಿ ರುದ್ರನು ದುಷ್ಟಶಕ್ತಿಗಳಿಗೆ ಅಧಿಪತಿಯೆಂಬಂತೆ ಚಿತ್ರಿತನಾಗಿದ್ದಾನೆ. ರುದ್ರ ಎಂದರೆ ಗರ್ಜಿಸುವವನು ಎಂದರ್ಥ. ಮುಂದೆ ಶಿವನಿಗೆ ಅನ್ವಯಿಸಲಾದ ಅನೇಕ ಲಕ್ಷಣಗಳನ್ನು ರುದ್ರನಿಗೆ ಅನ್ವಯಿಸಿ ಅಲ್ಲಿ ಹೇಳಲಾಗಿದೆ. ವೇದದ ಈಚಿನ ಭಾಗದಲ್ಲಿ ರುದ್ರನಿಗೆ 'ಶಿವ' ಎಂಬುದು ಒಂದು ವಿಶಿಷ್ಟ ವಿಶೇಷಣವಾಗಿ ಪರಿಣಮಿಸಿದೆ. ಅವರನ್ನು 'ಮಹಾದೇವ' ಎಂದು ಕರೆದಿರುವುದು ಉಂಟು.

ಶೈವ ಧರ್ಮಕ್ಕೆ ಮೂಲಾಧಾರಗಳಾದ ಆಗಮಗಳ ವಿಷಯವಾಗಿ ಕೆಲವು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಆಗಮ ಎಂಬುದು 'ಗಮ್' ಎಂಬ ಧಾತುನಿನಿಂದ ಬಂದಿದೆ. 'ಆಗಮ' ಎಂದರೆ ಬಂದದ್ದು ಕಾಣಿಸಿಕೊಂಡದ್ದು ಎಂದರ್ಥ. ಶಿವನು ಪಾರ್ವತಿಗೆ ಭೋದಿಸಿದ ವಿಷಯಗಳೇ (ಶೈವ ಮತ್ತು ಶಿಷ್ಟ) ಆಗಮಗಳಲ್ಲಿರುವವು ಎಂದು ನಂಬುತ್ತಾರೆ. ಶಾಸನಗಳಲ್ಲಿ ಲಕುಲಿಶ, ಪಾಶುಪತ ಮತ್ತು ಕಾಳಮುಖಿಗಳೆರಡು ಬೇರೆ ಬೇರೆ ಎಂದು ಸ್ಪಷ್ಟವಾಗಿ ಹೇಳಿಲ್ಲ. ಹೆಸರುಗಳನ್ನು ನೋಡಿದ ಇಬ್ಬರ ಹೆಸರುಗಳು ಶಕ್ತಿ ಪಂಡಿತ ದೇವ ಎಂದು ಕೊನೆಯಾಗುತ್ತದೆ.

**ಲಕುಲಿಶ ಪಾಶುಪತ :**

ಮಹಾಭಾರತದಲ್ಲಿ ಹೇಳಿರುವ ಐದು ಸಿದ್ಧಾಂತಗಳಲ್ಲಿ ಪಾಶುಪತ ಒಂದು. ಅರ್ಜುನನ್ನು ಶಿವನ ಕೃಪೆಯಿಂದ ಪಾಶುಪತಾಸ್ತ್ರವನ್ನು ಪಡೆದ ವಿಷಯ ಪ್ರಸಿದ್ಧವಾಗಿದೆ. ಹೀಗೆ ಶೈವ ಧರ್ಮ ಅತ್ಯಂತ ಪುರಾತನವಾದ ಧರ್ಮವಾಗಿದೆ. ಪಾಶ ಜೀವಿಗಳ ಒಡೆಯ ಪಶುಪತಿ ಪಾಶವನ್ನು ಕತ್ತರಿಸಲು ("ಪಶು ಪಾಶ ವಿಮೋಕ್ಷಣ") ಪಶುಪತಿ ಅಥವಾ ಮಹೇಶ್ವರನಿಗೆ ಶರಣು ಹೋಗಬೇಕು. ಪಾಸುಪತ ವ್ರತವನ್ನು ಅಂಗೀಕರಿಸಿ ಆಚರಿಸಿಬೇಕು. ಹೀಗೆ ಪಾಶುಪತ ಧರ್ಮವು ಶೈವ ಧರ್ಮಕ್ಕೆ ಮತ್ತೊಂದು ಹೆಸರಾಯಿತು. ಅವರ ಅನುಯಾಯಿಗಳು ಮಹೇಶ್ವರರೆಂದು ಪ್ರಸಿದ್ಧರಾದರು. ೭ನೆಯ ಶತಮಾನದ ಚೀನೀ ಪ್ರವಾಸಿ ಹ್ಯೂಯನತ್ಸಾಂಗ್ ತನ್ನ ಪುಸ್ತಕದಲ್ಲಿ ತನ್ನ ಪುಸ್ತಕದಲ್ಲಿ ಪಾಶುಪತರ ಹೆಸರನ್ನು ೧೨ ಸಾರಿ ಹೇಳುವುದಲ್ಲದೆ ಮಹೇಶ್ವರ ದೇವಸ್ಥಾನಗಳು ಕೆಲವೆಡೆ ಇದ್ದುವೆಂದು ಅಲ್ಲಿ ಪಾಶುಪತರು ಧ್ಯಾನ ಮಾಡುತ್ತಿದ್ದರೆಂದು ಹೇಳುತ್ತಾನೆ.[೨೨]

ಶೈವ ಧರ್ಮಕ್ಕೆ ಲಾಕುಲ ಸಮಯ ಎಂಬ ಮತ್ತೊಂದು ಹೆಸರು ಇದೆ. ಈ ಹೆಸರೆ ಬಹುಶಃ ಪ್ರಾಚೀನವಾದುದು ಇದು ಲಕುಲಿಶ ಎಂಬ ಭಗವಂತನ ಹೆಸರಿಟ್ಟು ಪಾಶುಪತ ಸಮಯ ಎಂದು ಮುಂದಿನವರು ಮಾಡಿಕೊಂಡಿರಬೇಕೆಂದು ಹೇಳುತ್ತಾರೆ.

**ಕಾಳಾಮುಖ :**

ಲಾಕುಳ ಮತ್ತು ಪಾಶುಪತರಿಗೆ ಕಾಳಾಮುಖರೆಂಬ ಹೆಸರೂ ಇದೆ. ಕಾಳಾಮುಖರು ಕಾಪಾಲಿಕರು ಗುಂಪಿಗೆ ಸೇರಿದಂತೆ ರಾಮಾನುಜರು ನಿರೂಪಿಸುವುದನ್ನು ಆಧಾರವಾಗಿಟ್ಟುಕೊಂಡು ಡಾ.ಆರ್.ಜಿ.ಭಂಡಾರ್ಕರ್ ಅವರು ಕಾಳಾಮುಖರು ಕಾಪಾಲಿಕರೆಂದು ಸಂಪೂರ್ಣವಾಗಿ ವಾಮಾಚಾರಗಳ ಪಂಥವಾದರೆ ಕಾಳಾಮುಖ ಶುದ್ಧ ಸಾತ್ವಿಕಾಚರಣೆಗಳ ಪಂಥ. ಕನ್ನಡ ಶಾಸನಗಳನ್ನು ಅಧ್ಯಯನ ಮಾಡಿದರೆ ಎಲ್ಲಿಯೂ ಕಾಳಮುಖರನ್ನು ಕಾಪಾಲಿಕರೆಂದು ಕರೆದಿಲ್ಲವೆಂಬುದು ಗೋಚರವಾಗುತ್ತದೆ. ಮಾತ್ರವಲ್ಲ ಅವರು ಪಾಶುಪತ ಲಾಕುಲ ವರ್ಗಕ್ಕೆ ಸೇರಿದವರೆಂಬುದಕ್ಕೆ ಸ್ಪಷ್ಟವಾಗುತ್ತದೆ. ಇವನ್ನು 'ಅಸಿತವಕ್ತ್ರ'ರೆಂದು ತಮಿಳು ನಾಡಿನ ಶಾಸನವೊಂದರಲ್ಲಿ ಕರೆದಿದೆ. ಮುಖದ ಮೇಲೆ ಕರಿಯ ಗೆರೆಗಳನ್ನು ಹಚ್ಚಿಕೊಟ್ಟಿದ್ದರಿಂದ ಇವರನ್ನು ಕಾಳಾಮುಖರೆಂದು ಕರೆಯುತ್ತಿದ್ದಿರಬೇಕು. ಕಾಳಮುಖರೂ ಲಕುಲೀಶರೂ ಒಂದೆಯೇ ಎಂದು ಕನ್ನಡ ಶಿಲಾಸನಗಳ ಸಾರುತ್ತದೆ. ವರ್ಷಕಾಲ 'ಮುಖ'ರೆಂದು ಕಾಳಾಮುಖ ಗುರುಗಳೊಬ್ಬರನ್ನು ಕನ್ನಡ ಶಾಸನಗಳಲ್ಲಿ ಹೇಳಲಾಗಿದೆ.

ವೀರಶೈವ ಧರ್ಮದ ಉತ್ಕರ್ಷಕ್ಕೆ ಮುನ್ನ ಕನ್ನಡನಾಡಿನಲ್ಲಿ ಜೈನರನ್ನು ಬಿಟ್ಟರೆ ಇವರೇ ಅತ್ಯಂತ ಪ್ರಬಲರಾಗಿದ್ದವರು. ಇವರು ಅನೇಕ ರಾಜರಿಂದ ಪೂಜಿತರಾಗಿದ್ದು ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಆ ಧರ್ಮವನ್ನು ಹೆಸರಿಸುವ ಅತ್ಯಂತ ಪ್ರಾಚೀನ ಶಾಸನವೆಂದರೆ ಕಿಗ್ಗದ ಶಾಸನ ಇವೆ. ಈ ಶಾಸನದಲ್ಲಿ ಪಾಶುಪತನವನ್ನು ಹೆಸರಿಸಿದೆ. ಮತ್ತೊಂದು ಕೋಲಾರ ಶಾಸನದಲ್ಲಿ ಪಾಶುಪತಿಯೋಗಚಾರ್ಯ ಜ್ಞಾನರಾಶಿ ವ್ಯಾಖ್ಯಾನ ದೇವರ ಹೆಸರು. ಮತ್ತೊಂದು ಕೊಲ್ಲಾಪುರದ ಲಕ್ಷ್ಮೀಯ ಆರಾಧಕರಾದ ಪರಮ ಪಾಶುಪತಾ.. ಹೆಸರು ಅದೇ ಕಾಲದ ಶಾಸನವೊಂದರಲ್ಲಿ ಇವರು ಪಂಚಲಿಂಗದೇವನ್ನು ಆರಾಧಿಸುತ್ತಾ ಅಲ್ಲಿಯ ಅಭಿನವ ಪಾಶುಪತ ಮಠಕ್ಕೆ ಒಡೆಯರಾಗಿದ್ದರು.

ಕಾಳಾಮುಖ ಎಂಬ ಹೆಸರು ಬರುವ ಗಂಗಾವತಿ ತಾಲೂಕಿನ ಶಾಸನಗಳಲ್ಲಿ ಹೆಸರಿಸಬಹುದು. ಹಿರೇಜಂತಗಲ್ ಶಾಸನವೊಂದರಲ್ಲಿ "ನಾಗಪಂಡಿತ ಚಿಕ್ಕನಾಯಕ ಪಂಡಿತ" ಎಂದು ಹೆಸರು ಉಲ್ಲೇಖವಿದೆ.

**ಶೈವ ಧರ್ಮದ ಶಾಖೆಗಳು :**

ಸೂತ ಸಂಹಿತೆಯಲ್ಲಿ ಕಾಪಾಲಿಕ,ಲಾಕುಲ ಪಾಶುಪತ ಸೋಮ ಭೈರವ ಎಂಬ ಹೆಸರಿಸಿದೆ.

ಶಾಸನಗಳಲ್ಲಿ ಎಲ್ಲಿಯೂ ಪಾಶುಪತ ಮತ್ತು ಕಾಳಾಮುಖಗಳೆರಡು ಬೇರೆ ಬೇರೆ ಎಂದು ಸ್ಪಷ್ಟವಾಗಿ ಹೇಳಿಲ್ಲ. ಹೆಸರುಗಳನ್ನು ನೋಡಿದರ ಇಬ್ಬರ ಅಲ್ಲಿನ ಸ್ಥಾನಸತಿಗಳು ನೈಷ್ಠಿಕರೂ ಕಾಳಾ ಮುಖರೂ ಆಗಿರಬೇಕು ಎಂಬು ನಿಯಮವನ್ನು ಶಾಸನಗಳು ಉಲ್ಲೇಖಿಸಿವೆ. ಗಂಗಾವತಿ ತಾಲೂಕಿನ ಹಿಪ್ರ ಶಾಸನವೊಂದರಲ್ಲಿ "ತಪೋದರನರಿಗಂ" ಎಂದು ಉಲ್ಲೇಖವಿದೆ.

ಈ ಕಾಳಾಮುಖರು ಸಂಸ್ಕೃತದಲ್ಲಿ ಶ್ರೇಷ್ಠ ವಿದ್ವಾಂಸರಾಗಿದ್ದ ಅಂಶವನ್ನು ಶಾಸನಗಳು ಮುಕ್ತಕಂಠದಿಂದ ಹೊಗಳುತ್ತವೆ. ಇವರು ಕನ್ನಡ ನಾಡಿಗೆ ಹೊರಗಿನಿಂದ ಬಂದವರು ಎಂಬ ಭಾವನೆಯನ್ನು ಸ್ಥಿರಪಡಿಸುತ್ತದೆ. ಶ್ರೀ ಶೈಲ ಮಲ್ಲಿಕಾರ್ಜುನ ದೇವಾಲಯದ ವ್ಯವಹಾರವನ್ನು ಲಾಕುಳ ಶೈವರು ನಡೆಸುತ್ತಿದ್ದರೆಂಬುದಕ್ಕೆ ಇದು ಒಂದು ಸಾಕ್ಷಿ. ಕ್ರಿ.ಶ. ೧೧೪೯ರ ಶಾಸನವೊಂದರಲ್ಲಿ ಗಂಗರಾಶಿ ದೇವರು "ಶ್ರೀ ಪರ್ವತದ ಸಿದ್ಧ ವಟ್ಟಿದಾಚಾರ್ಯನಾಗಿದ್ದು ಅವನ ಶಿಷ್ಯರು ಕರ್ನಾಟಕದಲ್ಲಿ ಸ್ಥಾನಪತಿಗಳಾಗಿದ್ದರು. ಹೀಗೆ ಶ್ರೀ ಶೈಲವು ಲಾಕುಳ ಶೈವರ ಒಂದು ಪ್ರಸಿದ್ಧ ಕೇಂದ್ರವಾಗಿದ್ದಿತೆಂದು ತಿಳಿದುಬರುತ್ತದೆ. ಓಬಳಬಂಡಿ ಶಾಸನವೊಂದರಲ್ಲಿ ನಿಜಗುಣ ಪಂಡಿತದೇವ ಎಂದು ಉಲ್ಲೇಖವಿದೆ. ವಿಪ್ರ ಶಾಸನವೊಂದರಲ್ಲಿ ತ್ರಿಭುವನಮಲ್ಲ ಕಲ್ಯಾಣದಲ್ಲಿ ಆಳುತ್ತಿದ್ದಾಗ ಅವನ ಮಾಂಡಲಿಕನಾದ ತ್ರಿಭುವಮಲ್ಲ ಪಾಂಡ್ಯ ಕಂಪ್ಲಿಯ ಗವಿಸಿದ್ದೇಶ್ವರ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ. ಮತ್ತೊಂದು ವಿಪ್ರ ಶಾಸನವೊಂದರಲ್ಲಿ ಚಾಲುಕ್ಯ ದೊರೆ ತ್ರಿಲೋಕಮಲ್ಲನು ವಿಪ್ರ ಶಿವದೇವಾಲಿಯಕ್ಕೆ ದಾನ ನೀಡಿದ್ದನ್ನು ಆನೆಗೊಂದಿ ಶಾಸನವೊಂದರಲ್ಲಿ ಪ್ರೌಢದೇವರಾಯನ ಮಾಂಡಲಿಕನಾದ ತಿರುವೆಂಕಟನು ಆನೆಗೊಂದಿ ಭೈರದೇವರಿಗೆ ದಾನ ನೀಡಿದ ಉಲ್ಲೇಖವಿದೆ. ಮತ್ತೊಂದು ಆನೆಗೊಂದಿ ಶಾಸನದಲ್ಲಿ ಅಚ್ಯುತರಾಯನ ಕಾಲದಲ್ಲಿ ಅಚ್ಯುತದೇವನಿಗೆ ಪುಣ್ಯವಾಗಲೆಂದು ಬಸವರಾಜ ದೇವರಿಗೆ ದಿನನಿತ್ಯ ನೈವೇದ್ಯ ಸಲುವಾಗಿ ಅರವಟ್ಟಿಗೆ ನಿರ್ಮಿಸಿದನು.

**ವೈಷ್ಣವ ಧರ್ಮ :**

ಪ್ರಾಚೀನ ಕರ್ನಾಟಕದ ಶೈವ ಧರ್ಮವನ್ನು ಚರ್ಚಿಸಿರುವ ಹಿಂದಿನ ಅಧ್ಯಯನದ ಆರಂಭದಲ್ಲಿ ಶಿವನ ಆ ದೇವತೆಯ ಇತಿಹಾಸ ವಿಕಾಸಾದಿಗಳನ್ನು ಸಂಗ್ರಹವಾಗಿ ವಿಚಾರ ಮಾಡಲಾಗಿದೆ. ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂ ಧರ್ಮದಲ್ಲಿ ಅವನಷ್ಟು ಪ್ರಬಲ ದೇವತೆಯಾಗಿರುವ ವಿಷ್ಣುವಿಗೂ ಒಂದು ಇತಿಹಾಸವಿದೆ.

ವೇದದಲ್ಲಿ ಆತನು ೩ ಹೆಜ್ಜೆಗಳಿಂದ ಆಕಾಶವನ್ನು ಆಕ್ರಮಿಸಿ ತ್ರಿವಿಕ್ರಮನಾಗಿರುವನು ಪೌರಾಣಿಕಯುಗದಲ್ಲಿ ವಿಷ್ಣು ವಾಮನಾಗಿ ಬಂದು ಬಲಿಯಿಂದ ಮೂರುಪಾದ ಭೂಮಿಯನ್ನು ಬೇಡಿ ಅವನನ್ನು ಪಾತಾಳಕ್ಕೆ ಮೆಟ್ಟಿದನೆಂಬ ಕಥೆ ರೂಢಿಯಲ್ಲಿ ಬಂದಿತ್ತು. ವೇದದಲ್ಲಿ ವಿಷ್ಣು ರಕ್ಷಕನೂ ಪರಹಿತೇಚ್ಛವು ಆಗಿದ್ದು ಲೋಕಕಲ್ಯಾಣಕ್ಕಾಗಿ ತ್ರಿವಿಕ್ರಮನಾಗಿರುವನು ಆದರು ಸೌರದೇವತೆಗಳಾದ ಸವಿತ್ರ ಪೂಷನ್ ಮೊದಲಾದವರಂತೆ ಸೂರ್ಯಯಿಂದ ಭಿನ್ನನಲ್ಲ.

ಭಾಗವತ ಧರ್ಮದ ಇತಿಹಾಸದಲ್ಲಿ ಮುಖ್ಯವಾಗಿ ೩ ಘಟ್ಟಗಳನ್ನು ಗುರುತಿಸಬಹುದು. ಮೊದಮೊದಲು ಭಾಗವತ ಧರ್ಮವು ತನಗೊಂದು ದರ್ಶನದ ಅವಲಂಭನವು ಬೇಕಾಗಿದ್ದುದರಿಂದ ಸಾಂಖ್ಯ ಮತ್ತು ಯೋಗಗಳ ಕಡೆಗೆ ತಿರುಗಿದಂತೆ ಕಾಣುತ್ತದೆ. ಇದರ ಫಲವಾಗಿ ಧರ್ಮವನ್ನು ಭಗವಂತ ಎಂಬ ಅರ್ಥದಲ್ಲಿ 'ಪುರುಷ' ಎಂಬ ಪದವು ಭಗವಂತದಲ್ಲಿ ಶ್ರದ್ಧೆ ಭಕ್ತಿ ಎಂಬ ಅರ್ಥದಲ್ಲಿ 'ಯೋಗ' ಎಂಬ ಪದವು ಪ್ರವೇಶಿದವು.

ಕ್ರಿ.ಪೂ. ೬ನೆಯ ಶತಮಾನದಲ್ಲಿ ದೈವಿಕ ಧರ್ಮವು ಬೌದ್ಧ ಧರ್ಮವನ್ನೆದುರಿಸಲಾರದೆ ಆಗ ಬಹು ಜನ ಪ್ರಿಯವಾಗುತ್ತಿದ್ದ ಭಾಗವತ ಧರ್ಮದೊಡನೆ ಸ್ನೇಹವನ್ನು ಬೆಳಸಲು ಸಿದ್ಧವಾಯಿತು. ಅದರ

ಫಲವಾಗಿವೈದಿಕ ಸಾಹಿತಿಗಳ ವಿಷ್ಣುವನ್ನು ಭಾಗವತನೊಡನೆ ಸಮೀಕರಿಸಬೇಕಾಯಿತು. ಇಲ್ಲಿಂದ ಮುಂದೆ ಧರ್ಮವೆಂಬುದು ಭಾಗವತ ಧರ್ಮದ ಇನ್ನೊಂದು ಹೆಸರಾಗಿ ಪರಿಗಣಿತವಾಯಿತು. ವಾಸುದೇವ ಮತ್ತು ವಿಷ್ಣುವಿನ ಸಮೀಕರಣವು ಭಗವತ ಅವತಾರಗಳಲ್ಲಿ ಅಚ್ಚುಮೆಚ್ಚಿನ ರಾಮ, ಕೃಷ್ಣರಿಬ್ಬರು ಕ್ಷತ್ರಿಯಾಗಿದ್ದರಿಂದ ಭಾಗವತರಿಗೆ ಅವರಿಬ್ಬರೂ ಅಚ್ಚುಮೆಚ್ಚಿನ ದೇವತೆಗಳಾಗಿದ್ದವು.

ಈ ವೈದಿಕ ಭಗವತ ಸಂಪ್ರದಾಯವನ್ನು ಕ್ರಿ.ಶ. ೮ - ೯ನೆಯ ಶತಮಾನಗಳಲ್ಲಿ ಶಂಕರಬಾಳನು ವೈದಿಕ ಧರ್ಮವನ್ನು ಕಟುವಾಗಿ ಖಂಡಿಸಿದಾಗ ಭಗವತ ಸಂಪ್ರದಾಯದ ಅನುಯಾಯಿಗಳು ಅದನ್ನು ಸಮರ್ಥಿಸಿ ರಕ್ಷಿಸಬೇಕಾಯಿತು. ೧೨ನೆಯ ಶತಮಾನದಲ್ಲಿ ರಾಮಾನುಜರ ನಂತರ ಬಂದ ಮಧ್ವಾಚಾರ್ಯರ ಇವರೆ ವೈದಿಕಕ್ಕೆ ಮೂಲಕರ್ತರು.

ವಿಷ್ಣುವಿನ ೧೦ ಅವತಾರಗಳಲ್ಲಿ ಯಾವುದನ್ನೇ ಪೂಜಿಸಲಿ ಈ ಧರ್ಮವು ಮುಖ್ಯವಾಗಿ ಏಕ ದೇವೋಪಸೆಯನ್ನು ಎತ್ತಿಹಿಡಿಯುತ್ತದೆ. ಭಿನ್ನ ಭಿನ್ನ ಕರ್ತವ್ಯಗಳನ್ನು ಹೊತ್ತಿರುವ ಬ್ರಹ್ಮ, ಶಿವ ಮುಂತಾದ ಅಸಂಖ್ಯಾತ ದೇವತೆಗಳಿಗೆ ಈ ಧರ್ಮವು ಗೌರವವನ್ನು ತೋರಿಸುತ್ತದೆ. ಬೌದ್ಧಿಕವಾದ ಜ್ಞಾನಕ್ಕಿಂತ ಭಾವರೂಪವಾದ ಭಕ್ತಿಯೇ ಶ್ರೇಷ್ಟವೆಂದು ವೈಷ್ಣವ ಧರ್ಮವು ಒತ್ತಿ ಹೇಳುತ್ತದೆ. ಹಿಂದೂ ಧರ್ಮದ ಇತರ ಮತಗಳಂತೆಲ್ಲದೆ ಸಮಾಜದ ಕೆಳವರ್ಗದ ಶೂದ್ರರನ್ನು ಹತ್ತಿರಕ್ಕೆ ಸೇರಿಸಿಕೊಂಡಿದ್ದು ಅವರಿಗೂ ಮೋಕ್ಷವುಂಟೆಂದು ಸಾರಿತು.

**ಕರ್ನಾಟಕದಲ್ಲಿ ವೈಷ್ಣವ ಧರ್ಮ :**

ಭಾಗವತ ಧರ್ಮವು ದಕ್ಷಿಣ ಭಾರತವನ್ನು ಕ್ರಿಸ್ತ ಪೂರ್ವದಲ್ಲಿಯೇ ಪ್ರವೇಶಿಸಿದ್ದಿತೆಂದು ನಾನ್ ಘಟ್ ಶಾಸನದಿಂದ ತಿಳಿದುಬರುತ್ತದೆ. ಶಾಸನಗಳಲ್ಲಿ ಭಾಗವತ ವೈಷ್ಣವ ಎಂಬ ಉಕ್ತಿಗಳು ದೊರೆಯುತ್ತವೆ. ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು[೧೦] ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.

೬ನೆಯ ಶತಮಾನದಲ್ಲಿ ಮಹಾಭಾಗವತನಾದ ಚಾಲುಕ್ಯರಾಜ ಮಂಗಳೇಶನು ಬಾದಾಮಿಯಲ್ಲಿ ಪ್ರಸಿದ್ಧವಾದ ವೈಷ್ಣವ ಗುಹಾಂತ ದೇವಾಲಯ ನಿರ್ಮಿಸಿದನು. ಮುಂದಿನ ಅನೇಕ ಶಾಸನಗಳಲ್ಲಿ ವಿಷ್ಣುದೇವಾಲಯ ರಚನೆ, ಅವುಗಳಿಗೆ ಬಿಟ್ಟ ದಾನಗಳ ವಿವರಗಳು ಕಂಡುಬರುತ್ತವೆ. ಅತ್ತಿಮಬ್ಬೆ ಲಕ್ಕುಂಡಿ ಶಾಸನದಲ್ಲಿ[೧೧] ಲಕ್ಕುಂಡಿ ಮಹಾಜನರನ್ನು 'ವೈಷ್ಣವಗಿತಿ' ಮನೋಹರ" ಎಂದು ಕರೆದಿದೆ.

ಅದೇ ಕಾಲದ ಬೇಲೂರಿನ ಶಾಸನದಲ್ಲಿ ಶ್ರೀ ವೈಷ್ಣವರ ಹೆಸರುಗಳು ಕಾಣಿಸಿಕೊಳ್ಳುತ್ತವೆ. ರಾಮಾನುಜರ ಅನುಯಾಯಿಗಳನ್ನು ಶ್ರೀ ವೈಷ್ಣವರೆಂದು ಕರೆಯುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಇವರು ಶ್ರೀ ವೈಷ್ಣವ ಧರ್ಮವನ್ನು ಪ್ರಚಾರ ಮಾಡಿದರು.

ಹೀಗೆ ಕರ್ನಾಟಕದ ವೈಷ್ಣವ ಧರ್ಮದ ಇತಿಹಾಸದಲ್ಲಿ ರಾಮಾನುಜರ ಪ್ರವೇಶಕ್ಕಿಂತ ಮುನ್ನ ಇದ್ದ ಭಾಗವತ ಸಂಪ್ರದಾಯ ವೈಷ್ಣವ ಧರ್ಮ ಶ್ರೀ ರಾಮಾನುಜರ ಶ್ರೀ ವೈಷ್ಣವ ಧರ್ಮ ಮಧ್ವಾಚಾರ್ಯರ ದ್ವೈತಸಿದ್ಧಾಂತ ಇವುಗಳನ್ನು ಗುರುತಿಸಬಹುದು. ರಾಮಾನುಚಾರ್ಯರಿಗಿಂತ ಹಿಂದೆ

ಕರ್ನಾಟಕದಲ್ಲಿ ಶ್ರೀ ರಾಮಾನುಜರ ಶ್ರೀ ವೈಷ್ಣವ ಧರ್ಮವು ಹೆಚ್ಚು ಪ್ರಚಾರವಾದುದ್ದು ಹೆಚ್ಚು ಕಾರ್ಯನಿರತವಾದದ್ದು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಎಂಬುದನ್ನು ನೋಡಿದ್ದೇವೆ. ಮದ್ವಾಚಾರ್ಯರು ಪರಂಪರೆಯ ಬೆಳೆದುಕೊಂಡು ಬಂದ ರೀತಿಯನ್ನು ವಿಸ್ತಾರವಾಗಿ ಚರ್ಚಿಸಲು ವಿಫುಲ ಸಾಮಾಗ್ರಿಗಳು ದೊರೆಯುತ್ತದೆ.

**ಟಿಪ್ಪಣಿಗಳು**

೧. Rhys Davids T.W. Buddhist India 31

೨. Iyengar S.K. 138

೩. Medival Janisim B.A Saltture ೨

೪. ಶಾಸನ ಪದ್ಯ ಮಂಜರಿ ೨೫೦ರಲ್ಲಿ

೫. ಕ.ವಿ.ವಿ, ಸಂ ೨, ಗಂ ತಾ ೧೯

೬. ಅದೇ ೨೧

೭. ಅದೇ ೧೦೯

೮. ಅದೇ ೭೩ -

೯. ಅದೇ ೨

೧೦. ಅದೇ ೪೫

೧೧. ಅದೇ ೪೮

೧೨. ಅದೇ ೪೯

೧೩. ಅದೇ ೫೮

೧೪. ಅದೇ ೭೭

೧೫. ಅದೇ ೮೧

೧೬. Yas asticlaka and Indian culture

೧೭. ಕ.ವಿ.ವಿ, ಶಾಸನ ಸಂ ೨, ೩೪

೧೮. ಅದೇ ೪೫

೧೯. ಅದೇ ೫೮

೨೦. ಅದೇ ೪೫

೨೧. ಅದೇ ೪೮

೨೨. Thomas Wa..ers on Chawangs Trenrts in India I P 296 II P 229

೨೩. ಕ.ವಿ.ವಿ, ಸಂ ೨ ಕ್ರಿ.ಶ. ೬.೬.೧೫೩೩

೨೪. Yasiastilaka and Indian Culture 510

೨೫. ಎ.ಪಿ. ಕರ್ನಾಟಕ ಸಂ ೧೨, ಶಿರಾ ೨೮, ಶಿಕಾರಿಪುರ ೧೦೭, ೯೪, ೯೮, ೧೧೪, ೩೧೬

೩೬. ಕ.ವಿ.ವಿ, ಸಂ ೨, ೪.೭.೧೫೪೪

೩೭. S.N.Dasgupta A History of Indian Philosophy V I, P 50

೩೮. EI XV P 1049 AD, EI XVA 1058 AD, P 97 - 87

೩೯. ಕ.ವಿ.ವಿ, ಸಂ ೨, ಗಂ ತಾ, ೧

೩೦. EC XII CK, 29, 1149 AD

೩೧. ಕ.ವಿ.ವಿ, ಸಂ ೨, ಗಂ ತಾ, ೮೭

# ಅಧ್ಯಾಯ ಏಳು

## ಸಾಮಾಜಿಕ ವ್ಯವಸ್ಥೆ

ಸಮಾಜ ಪದವು ಸೊಸೈಟಿ (Society) ಎಂಬ ಇಂಗ್ಲೀಷ್ ಪದದ ಕನ್ನಡ ಅನುವಾದವಾಗಿದೆ. "ಸೊಸೈಟಿ" ಎಂಬ ಪದವು ಸೋಷಿಯಸ್ (Socious) ಎಂಬ ಲ್ಯಾಟಿನ್ ಭಾಷೆಯ ಪದದಿಂದ ಆವಿರ್ಭವಿಸಿದೆ. ಸೊಸಿಯಸ್ ಎಂದರೆ ಒಡನಾಡಿನತನ (Companionship) ಅಥವಾ ಗೆಳೆತನ (Friendship) ಒಡನಾಡಿಗಳಿಂದ ಒಳಗೂಡಿರುವುದೇ ಸಮಾಜ. ರೂಡಿ ಪದ್ಧತಿಗಳು ಮತ್ತು ಕಾರ್ಯ ವಿಧಾನಗಳು ಅಧಿಕಾರ ಮತ್ತು ಪರಸ್ಪರ ಸಹಾಯ, ಅನೇಕ ಸಮೂಹಗಳು ಮತ್ತು ವಿಭಾಗಗಳು ಮಾನವನ ನಡತೆಯ ಮೇಲಿನ ನಿಯಂತ್ರಣಗಳು ಮತ್ತು ಸ್ವಾತಂತ್ರ್ಯ ಇವೆಲ್ಲವುಗಳನ್ನು ಒಳಗೊಂಡ ವ್ಯವಸ್ಥೆಯೇ ಸಮಾಜ.

ನಿರಂತರವಾಗಿ ಬದಲಾವಣೆ ಹೊಂದುತ್ತಿರುವ ಈ ಸಂಕೀರ್ಣ ವ್ಯವಸ್ಥೆಯನ್ನು ನಾವು ಸಮಾಜ ಎಂದು ಕರೆಯುತ್ತೇವೆ. ಅದು ಸಾಮಾಜಿಕ ಸಂಬಂಧಗಳ ಮೇಲೆ ಸದಾ ಪರಿವರ್ತನೆಯಾಗುತ್ತಿರುತ್ತವೆ. ಸಮಾಜವನ್ನು ಮತ್ತು ವರ್ಣ ಪದ್ಧತಿಯನ್ನು ಆಯಾ ವೃತ್ತಿಗುಣವಾಗಿ ವರ್ಗೀಕರಣ ಮಾಡಲಾಗುತ್ತಿತ್ತು.

ವರ್ಣ :

ವೈದಿಕ ಸಾಹಿತ್ಯದಲ್ಲಿ ವರ್ಣಗಳ ಉಗಮಕ್ಕೆ ಸಂಬಂಧಿಸಿದ ಮಾಹಿತಿ ಇದೆ. ಬ್ರಾಹ್ಮಣನು ಸೃಷ್ಟಿಕರ್ತನಾದ ಬ್ರಹ್ಮನ ಮುಖದಿಂದಲೂ ರಾಜನು (ಕ್ಷತ್ರಿಯ) ಬಾಹುಗಳಿಂದಲೂ, ವೈಶ್ಯನು ತೊಡೆಗಳಿಂದಲೂ ಮತ್ತು ಶೂದ್ರನು ಪಾದಗಳಿಂದಲು ಆವಿರ್ಭವಿಸಿದ್ದಾರೆ ಎಂದು ಹೇಳಲಾಗಿದೆ.

ಮನುಸ್ಮೃತಿಯಲ್ಲಿ ಮತ್ತು ಮಹಾಭಾರತದಲ್ಲಿಯೂ ಸಹ ವರ್ಣಗಳ ಬಗೆಗೆ ವಿವರಣೆಗಳು ಕಂಡುಬರುತ್ತದೆ.

ಸೃಷ್ಟಿಕರ್ತ ಬ್ರಹ್ಮನಿಂದ ಪ್ರಪ್ರಥಮವಾಗಿ ಕೇವಲ ಕೆಲವೇ ಮಂದಿ ಬ್ರಾಹ್ಮಣರ ಸೃಷ್ಟಿಯಾಯಿತು. ಅನಂತರ ಮನುಕುಲದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರ ವರ್ಣಗಳು ಅಭಿವೃದ್ಧಿಯಾದವು. ಬ್ರಾಹ್ಮಣರು ಬಿಳಿಬಣ್ಣದವರಾಗಿದ್ದು ಕ್ಷತ್ರಿಯರು - ಕೆಂಪುಬಣ್ಣದವರಾಗಿಯೂ, ವೈಶ್ಯರು ಹಳದಿಬಣ್ಣದವರಾಗಿಯೂ ಮತ್ತು ಶೂದ್ರ - ಕಪ್ಪುಬಣ್ಣದವರಾಗಿದ್ದರು ಎಂದು ಭಾವಿಸಿದ್ದಾರೆ.

ಸಮಾಜದಲ್ಲಿ ಶಿಕ್ಷಣ ಆಡಳಿತ ವ್ಯಾಪಾರ ಮತ್ತು ಶ್ರಮ ಎಂಬ ೪ ಪ್ರಮುಖ ವೃತ್ತಿಗಳನ್ನು ಗುರುತಿಸಲಾಗಿದ್ದು ಬ್ರಾಹ್ಮಣರು ಶಿಕ್ಷಣ ಪಡೆದು ಶಿಕ್ಷಕರಾಗಿ ಕ್ಷತ್ರಿಯರು ರಕ್ಷಕರಾಗಿ ವೈಶ್ಯರು ಧಾರಕರಾಗಿ ಶೂದ್ರರು ಸೇವಕರಾಗಿ ಕಾರ್ಯನಿರ್ವಹಿಸಲು ನಿರ್ದೇಶಿಸಲ್ಪಟ್ಟಿದೆ.

೧. ಬ್ರಾಹ್ಮಣರು :

ಪ್ರಾಚೀನ ಸಮಾಜದಲ್ಲಿ ಬ್ರಾಹ್ಮಣರು ಅತ್ಯಂತ ಗೌರವಾನ್ವಿತರೆನಿಸಿದರು. ಅತ್ಯಂತ ಪ್ರಭಾವಶಾಲಿಗಳು ಆಗಿದ್ದರು. ಹೂಯನತ್ಸಾಂಗ್ ಪ್ರಾಚೀನ ಸಮಾಜದಲ್ಲಿದ್ದ ೪ ವರ್ಣಗಳ ಬಗ್ಗೆ ಬರೆಯುತ್ತ ಬ್ರಾಹ್ಮಣರು ಪರಿಶುದ್ಧ ಜೀವನ ನಡೆಸುತ್ತಿದ್ದರೆಂದು ತತ್ವಗಳನ್ನು ಆಚರಣೆಯಲ್ಲಿ ತರುತ್ತಿದ್ದರೆಂದು ಧರ್ಮಾಚರಣೆಯಲ್ಲಿ ತೊಡಗುತ್ತಿದ್ದರೆಂದು ಉಲ್ಲೇಖಿಸುತ್ತಾನೆ.[೧] ಲಕ್ಷ್ಮೀಪುರ ಸ್ತಂಭ ಶಾಸನವು ೧೮ ಸಾಂಪ್ರದಾಯಿಕ ಜಾತಿಪ್ರಕೃತಿಕಗಳನ್ನು ಹೆಸರಿಸುತ್ತದೆ. ಈ ಶ್ರೇಣಿಯಲ್ಲಿ ಬ್ರಾಹ್ಮಣರ ಹೆಸರು ಮೊದಲು ಬರುತ್ತದೆ. ಜಾತಿ ಮತ್ತು ವರ್ಣ ಇವು ತಾತ್ವಿಕವಾಗಿ ಭಿನ್ನ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಜಾತಿಗಳೆಂದು ಕ್ರಮೇಣ ರೂಢಿಯಲ್ಲಿ ಬಂದವು. ಗಂಗಾವತಿ ತಾಲೂಕಿನ ಶಾಸನಗಳಲ್ಲಿ ಬ್ರಾಹ್ಮಣರಿಗೆ ದಾನ ದತ್ತಿಗಳನ್ನು ನೀಡುತ್ತಿದ್ದ ಉಲ್ಲೇಖವಿದೆ. ಮತ್ತು ಬ್ರಾಹ್ಮಣರನ್ನು ದೇವರಿಗೆ ಸಮಾನ ರೀತಿಯಲ್ಲಿ ಕಾಣುತ್ತಿದ್ದರು. ವಿಪ್ರ ಶಾಸನವೊಂದರಲ್ಲಿ "ಧರ್ಮಮಂ ಸ್ವರ್ಧದಿಂ ಶಿಕ್ಷಿಸಿದವರಿಗೆ ಬಾಣಾಸಿಯಲು ಸಾಸಿರ ಕವಿತೆಯಂ ಬ್ರಾಹ್ಮಣರಿಗು ತಪೋದರನರಿಗಂ ದಾನಂಗೆಯ್ದು ನಿಧನಗಳಿನಗಿತು" ಎಂದು ಉಲ್ಲೇಖವಿದೆ.[೨] ಅಂದರೆ ಈ ಧರ್ಮವನ್ನು ಸ್ವಧರ್ಮವೆಂದು ರಕ್ಷಿಸಿದವರಿಗೆ ಸಾವಿರ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದ ಪುಣ್ಯವು ಲಭಿಸುವುದು ಎಂದು ತಿಳಿದುಬರುತ್ತದೆ. ಹಿರೇಜಂತಗಲ್ ಶಾಸನವೊಂದರಲ್ಲಿ ಈ ದೇವರಾಯ ಬ್ರಹ್ಮರಾಯ ರೂಪದ ಈ ಧರ್ಮಕ್ಕೆ ಯಾರಾದರೂ ತೊಡಕನ್ನುಂಟು ಮಾಡಿದರೆ ಬ್ರಹ್ಮಹತ್ಯೆ (ಬ್ರಹ್ಮಣರನ್ನು ಕೊಲ್ಲುವುದು) ಗೋವಧೆ ಸುವರ್ಣಸ್ತೈರ್ಯ ಬಂಗಾರವನ್ನು (ಕದಿಯುವುದ) ಸುರಾಪಾನ ಗುರು ಪತ್ನಿಗಮನ ಈ ರೀತಿಯಾಗಿ ಐದು ಮಹಾಪಾತಕ ಮಾಡಿದ ಪಾಪಕ್ಕೆ ಒಳಗಾಗುವರು ಎಂದು ಉಲ್ಲೇಖವಿದೆ.[೩] ಮತ್ತೊಂದು ಆನೆಗೊಂದಿ ಶಾಸನವೊಂದರಲ್ಲಿ "ಶ್ರೀವರರು ದಯಮಾಡಿ ಪಾಲಿಸಿ ಆನೆಗೊಂದಿ ೧೫ ಕೊಳಗ ನೀರು ಭೂಮಿ ತಡವಾರ ಕೋಟೆಯಲ್ಲಿ ೧೫ ಕೊಳಗ ನೀರು ಭೂಮಿ ಒಟ್ಟು ೩೦ ಕೊಳಗ ಭೂಸ್ವಸ್ತ ಕೊಡದೆ ಸಿವಾಯದೇವ ಬ್ರಹ್ಮಣ ಸಾಧು ಸಂತರಿಗೆ ತಟಾಕದ ಆದಾಯ ನೀವೆ ಅನುಭವಿಸಬೇಕು ಎಂದು ಉಲ್ಲೇಖವಿದೆ.[೪] ಶಿಕಾರಿಪುರದ ಈಚಿನ ಒಂದು ಶಾಸನದ ಪ್ರಕಾರ ಮುಕ್ಕಣ ಕದಂಬರ ಕಾಲದಲ್ಲಿ ದಕ್ಷಿಣದಲ್ಲಿ ಬ್ರಾಹ್ಮಣರೆ ಇರಲಿಲ್ಲ. ಅವರಿಗಾಗಿ ಹುಡುಕಿ ಇಲ್ಲಿ ಯಾರು ಇಲ್ಲದ್ದನ್ನು ಕಂಡು ಮುಕ್ಕಣ್ಣ ಕದಂಬರು ಉತ್ತರಕ್ಕೆ ಹೋಗಿ ಅನೇಕ ಬ್ರಾಹ್ಮಣ ಸಂಸಾರಗಳನ್ನು ಕರೆತಂದು ಶಿವಮೊಗ್ಗ ಜಿಲ್ಲೆಯ ಸ್ಥಾನಕುಂದರ ಮತ್ತು ತಾಳಗುಂದದಲ್ಲಿ ನೆಲೆಸುವಂತೆ ಮಾಡಿದನು. ಕ್ರಿ.ಶ. ೨ನೆಯ ಶತಮಾನದಲ್ಲಿ ಮಳವಳ್ಳಿಯ ಒಬ್ಬ ಬ್ರಾಹ್ಮಣ ವಿದ್ವಾಂಸರಿಗೆ ದತ್ತಿಕೊಟ್ಟಿರುವ ವಿಷಯ ತಿಳಿಯುತ್ತದೆ.

ರಾಮದುರ್ಗ ಶಾಸನವೊಂದರಲ್ಲಿ ನೈವೇದ್ಯ ದೀಪಾರಾಧನೆಗೆ ನಡೆಸುವುದು ದೇವ ದ್ರವ್ಯಂ ರಾಜದ್ರವ್ಯಂ ವಿಪ್ರ ದ್ರವ್ಯಂ ದೈವ ಕಂತು ದ ಕಂಬ...... ಲಕ್ಷ...... ಎಂದು ಉಲ್ಲೆಖಿವಿದೆ.[೫] ಅಂದರೆ ನೈವೇದ್ಯ ದೀಪಾರಾಧನೆಗಾಗಿ ಸಲುವಾಗಿ ದಾನ ನೀಡಲಾಗಿದೆ. ದೇವರ ದ್ರವ್ಯವನ್ನು ರಾಜನ ದ್ರವ್ಯವನ್ನು ಬ್ರಾಹ್ಮಣರ ದ್ರವ್ಯವನ್ನು ಯಾರು ಅಪಹರಿಸುತ್ತಾರೊ. ಅವರು ಲಕ್ಷ ಪಾಪಕ್ಕೆ ಒಳಗಾಗುತ್ತಾರೆ ಎಂದು ತಿಳಿಸುತ್ತದೆ. ಮತ್ತೊಂದು ನವಲಿ ಶಾಸನವೊಂದರಲ್ಲಿ (ತೃಟಿತ) ಸದಾಶಿವರಾಯ ಮಹಾರಾಯರು ಹಾಕಿಸಿದ ಶಾಸನ. ಈ ಶಾಸನವನ್ನು ಯಾರಾದರೂ ನಾಶಪಡಿಸಿದರೆ. ವಾರಣಾಸಿಯಲ್ಲಿ ಬ್ರಾಹ್ಮಣನನ್ನು ಕೊಂದ ಪಾಪಕ್ಕೆ ಗುರಿಯಾಗುವರು ಎಂದು ಉಲ್ಲೇಖಿವಿದೆ.[೬] ಮತ್ತೊಂದು ಹಿರೆಜಂತಕಲ್ ಶಾಸನವೊಂದರಲ್ಲಿ ಸದಾಶಿವರಾಯನ ಆಳ್ವಿಕೆ ಕಾಲದಲ್ಲಿ ಅವನ ಮಾಂಡಲಿಕನಾದ ರಾಮರಾಜನ ತಮ್ಮ ತಿರುವೆಂಕಟ ರಾಜನ ಕಾರ್ಯಕರ್ತನಾದ ಚಂದ್ರಗಿರಿಯ ದಮರಸೈಯ್ಯನವರು ಬ್ರಾಹ್ಮದಾಯ (ಬ್ರಾಹ್ಮಣ)ಗಳಿಗೆ ಬಿಜವರಿ ೧ಕ್ಕೆ ಗಂ ಬಿಂನಾಹಂ ಮಾಡಿ ಆ ವೊಕ್ಕಳದ ಗದೆ ೧ ವೊಂದು ಹೊನ್ನನು ಬಿಡಿಸಿ ಸರ್ವ ಮಾನ್ಯವನ್ನು ಮಾಡಿದ ಎಂದು ಉಲ್ಲೇಖಿವಿದೆ.[೭]

ಹೀಗೆ ಬ್ರಾಹ್ಮಣರು ಪ್ರಾಚೀನ ಕಾಲದಿಂದ ಶ್ರೇಷ್ಟ ವರ್ಗದವರಾಗಿ ಬಂದಿದ್ದರು. ಇವರನ್ನು ಶಾಸನಗಳಲ್ಲಿ ದೇವರಿಗೆ ಸಮಾನ ಎಂದಿದ್ದಾರೆ. ಹೀಗೆ ಧರ್ಮಾಚರಣೆಗಾಗಿ ಬ್ರಾಹ್ಮಣರಿಗೆ ದಾನ ನೀಡುವುದು ಸಹಜವಾಗಿತ್ತು. ಕೆಲವು ಸಂದರ್ಭಗಳಲ್ಲಿ ಬೇರೆ ಕಾರಣ ನಿಮಿತ್ತ ದಾನವನ್ನು ಕೊಟ್ಟಿದ್ದು ಕಂಡುಬರುತ್ತದೆ. ದಾನ ಪಡೆದ ಬ್ರಾಹ್ಮಣರ ಕುಲಗೋತ್ರಗಳನ್ನು ಶಾಸನಗಳಲ್ಲಿ ತಪ್ಪದೇ ದಾಖಲಿಸಲಾಗುತ್ತಿತ್ತು. ಈ ಕೆಳಗಿನ ಗೋತ್ರಗಳನ್ನು ಗುರುತಿಸಿಬಹುದಾಗಿದೆ. ಅಗ್ನಿವೇಶ, ಆತ್ರೇಯ, ಕಾಶ್ಯಪ, ಕೌಂಡಿಣ್ಯ, ಕೌಶಿಕ, ಗಾರ್ಗ್ಯಯನಿ, ಗೌತಮ, ಭಾರದ್ವಾಜ, ಮೈತ್ರೆಯ ಮೌಧ್ಗಲ್ಯ, ವತ್ಸ, ವಾಶಿಷ್ಠ ವಿಶ್ವಾಮಿತ್ರ ಶಾಂಡಿಲ್ಯ, ಸಾವರ್ಣಿ ಹಾರಿತ ಇವರಲ್ಲಿ ಗಂಗಾವತಿ ತಾಲೂಕಿನ ಶಾಸನಗಳಲ್ಲಿ ಕೌಂಡಿನ್ಯಾ, ಭಾರದ್ವಾಜ, ಗೌತಮ, ಶಾಂಡಿಲ್ಯ ಗೋತ್ರದವರು ಕಂಡುಬರುತ್ತಾರೆ.

ಕೆಸರಟ್ಟಿ ಶಾಸನವೊಂದರಲ್ಲಿ ಕೃಷ್ಣದೇವರಾಯರನ್ನು ಆಳ್ವಿಕೆ ಮಾಡುತ್ತಿದ್ದಾಗ ಶಾಂಡಿಲ್ಯ ಗೋತ್ರದ ಕೊಂಡಾಜಟಿಯ ಮಗ ಕೃಷ್ಣಪ್ಪಯ್ಯನು ಕೇಸರಟ್ಟಿಯಲ್ಲಿ ಕೃಷ್ಣದೇವರನ್ನು ಪ್ರತಿಷ್ಟೆ. ಮಾಡಿಸಿ ಕೊಮಾರ ಪೇರುಮಾಳ ಮತ್ತು ಆತನ ತಮ್ಮ ರಾಮಾಂಜನೇಯ್ಯನಿಗೆ ಸ್ಥಾನಿಕ ಪದವಿ ನೀಡುತ್ತಾನೆ. ಕೃಷ್ಣಯ್ಯನು ಮಾತಿನಂತೆ ನಡೆಯಬೇಕೆಂದು ಇದಲ್ಲದೆ. ಭಾರದ್ವಾಜ ಗೋತ್ರದ ಚಿಟೆಯಯುಗ ಮಗ ತಿಂಮಯ್ಯ ಗೌತಮ ಗೋತ್ರದ ಕೊಕಲೆಚೆಟಿಯ ಮಗ ಹಜಪಯ್ಯ ಇವರಿಬ್ಬರು ಕೃಷ್ಣದೇವರ ಅಮೃತಪಡಿಗೆ ಇಕ್ಕುಳದ ಹೊಲ, ನಾಗುಳದ ಗದ್ದೆ ಹಾಗೂ ತೋಟವೊಂದನ್ನು ದಾನ ನೀಡುತ್ತಾನೆ. ಎಂದು ಉಲ್ಲೇಖಿವಿದೆ.[೮]

೨. ಕ್ಷತ್ರಿಯರು :

ಬ್ರಾಹ್ಮಣರು ತರುವಾಯ ಸಮಾಜದಲ್ಲಿ ಕ್ಷತ್ರಿಯರು ಸ್ಥಾನ ಹೊಂದಿದ್ದಾರೆ. ಕ್ಷತ್ರಿಯರು ಯೋಧರು ಇವರಿ ಗುರಿ ಪರೋಪಕಾರ ದಯೇ ಎಂದು ಹೂಯಾನ್‌ತ್ಸಾಂಗ್ ಹೇಳಿದ್ದಾನೆ.[೯] ಕರ್ನಾಟಕದಲ್ಲಿ ವಿಶಿಷ್ಟವಾದ ಕ್ಷತ್ರಿಯ ವರ್ಣವಿದ್ದಂತೆ ತೋರುವುದಿಲ್ಲ. ಯೋಧನು ತನ್ನ ಶೌರ್ಯದಿಂದ ವೀರತನ ಸಂಪಾದಿಸಿದಾಗ ಕ್ಷತ್ರಿಯನೆನಿಸುತ್ತಿದ್ದ. ರಾಜನಾದ ಬಳಿಕ ಕ್ಷತ್ರಿಯನೆಂಬ ಮನ್ನಣೆಗೆ ಪಾತ್ರನಾಗಲು

ಸಾಧ್ಯವಿತ್ತೆಂಬುದನ್ನು ಮಹಾಭಾರತದಲ್ಲಿ ಕಾಣುತ್ತೇವೆ. ಸೋತ ಕರ್ಣನನ್ನು ದುರ್ಯೋಧನ ಕ್ಷತ್ರಿಯನನ್ನಾಗಿಸಿದ್ದು ಹೀಗೆಯೇ. ಅಂದಿನ ಸಮಾಜದ ಧಾರ್ಮಿಕ ವ್ಯವಸ್ಥೆಯಲ್ಲಿ ಬ್ರಾಹ್ಮಣನು ಸರ್ವೋತೋಮುಖಿವೆನಿಸಿದರೆ ಆಡಳಿತ ವ್ಯವಸ್ಥೆಯಲ್ಲಿ ರಾಜನು ಸರ್ವಾಧಿಕಾರಿ ಎನಿಸಿದನು. ಬ್ರಾಹ್ಮಣರು ಆರ್ಥಿಕವಾಗಿ ಕ್ಷತ್ರಿಯರನ್ನು ಅವಲಂಬಿಸಿದರೆ ಅದರ ಪ್ರತಿಯಾಗಿ ಕ್ಷತ್ರಿಯರು ತಮ್ಮ ಪುಣ್ಯಾರ್ಜನೆಯ ವೈದಿಕ ಆಚರಣೆಗಾಗಿ ಬ್ರಾಹ್ಮಣರನ್ನು ಅವಲಂಬಿಸಿದ್ದರು.

ವೈಶ್ಯರು :

೩ನೆಯ ವರ್ಗದವರಾದ ವೈಶ್ಯರು ವರ್ತಕರು ಬ್ರಾಹ್ಮಣರು ನಾಡಿನ ಧಾರ್ಮಿಕ ಜೀವನವನ್ನು ರೂಪಿಸಿದರೆ, ಕ್ಷತ್ರಿಯರು ರಾಜ್ಯದ ಆಡಳಿತ ಸೂತ್ರವನ್ನು ಹಿಡಿದರು. ವೈಶ್ಯರು ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸಿದರು.

ವ್ಯಾಪಾರದ ಜೊತೆಗೆ ಅವರು ಆಡಳಿತದಲ್ಲಿ ಪಾಲ್ಗೊಂಡರು. ವಿಪ್ರ ಶಾಸನವೊಂದರಲ್ಲಿ ವಿಪ್ರ ನಾರಾಯಣದಲ್ಲಿ ಶಿವ ದೇವಾಲಯಕ್ಕೆ ಎಲೆಗಾರರು ಹೆರಿಗೆ ನೂರು ಎಲೆಯನ್ನು ಅಂದಳಕ್ಕೆ ೫೦ ಎಲೆಯನ್ನು ಬಿಟ್ಟು ಶಾಸನವನ್ನು ಬರೆಸಿದರು ಎಂದು ಉಲ್ಲೇಖವಿದೆ.[೧೦] ಕನ್ನೆರುಮಡು ಶಾಸನವೊಂದರಲ್ಲಿ ಸಾಳುವ ದೇವರಾಯನ ಕನ್ನೆರುಮಡು ಅಮರೇಶ್ವರ ದೇವರಿಗೆ ಯಲಬರಿಗೆ ಸೇರಿದ ಸೂಳೆಯ ಕೆರೆಯ ಇಕ್ಕಳ ಗದ್ದೆಯನ್ನು ಸೇನಭೋವ ಮಾಳಯ್ಯ ದೇವರ ಅಂಗರಂಗಭೋಗ ಅಮೃತಪಡಿಗೆ ನೈವೇದ್ಯಕ್ಕೆ ಸರ್ಮಪಿಸಿದ ಎಂದು ಉಲ್ಲೇಖವಿದೆ.[೧೧]

ಹೀಗೆ ಆಡಳಿತ ಮತ್ತು ಧಾರ್ಮಿಕ ಚಟುವಟಿಕೆ ಸಮಾಜದೊಂದಿಗೆ ಬೇರೆಯುವುದರ ಮೂಲಕ ವೈಶ್ಯರು ಬ್ರಾಹ್ಮಣರೊಂದಿಗೆ ಅರಸರೊಂದಿಗೆ ಒಳ್ಳೆಯ ಸಾಮಾಜಿಕ ಬಾಂಧವ್ಯವನ್ನು ಹೊಂದಿದ್ದರು ಇದು ಅವರ ವ್ಯಾಪಾರ ಅಭಿವೃದ್ಧಿಗೆ ಪೂರಕವಾಗಿತ್ತು.

ಮಧ್ಯ ಕರ್ನಾಟಕದಲ್ಲಿ ಶೆಟ್ಟಿ ಬಣಜಿಗ ಮೊದಲಾದವರು ವರ್ತಕರ ಶ್ರೇಣಿಯ ಮೂಲಕ ತಮ್ಮನ್ನು ಗುರುತಿಸಿಕೊಂಡಿದ್ದರು. ಆನೆಗೊಂದಿ ಶಾಸನವೊಂದರಲ್ಲಿ ಮೂಲಸಂಘ ದೇಸಿಗಣದ ನರೇಂದ್ರಸೇನ ಪ್ರಿಯಶಿಷ್ಯ ಹಾನಿಯ ಲಖ್ಖಿಸೆಟ್ಟಿಯ ಮಗ ಗೋಪಿಶೆಟ್ಟಿ ನಿಸಿಧಿ ಯಾದನು ಎಂದು ಉಲ್ಲೇಖವಿದೆ.[೧೨] ಆನೆಗೊಂದಿ ಶಾಸನವೊಂದರಲ್ಲಿ ಹೊನ್ನಹಟ್ಟಿಯ ಸಯಿತೆಯ ಮಗಳು ಸೊಯಿಸೆಟ್ಟಿಯು ನಿಸಿಧಿಯಾದಳೆಂದು ಉಲ್ಲೇಖಿಸಿದೆ. ಆನೆಗೊಂದಿ ಶಾಸನವೊಂದರಲ್ಲಿ ಭಯಿರಿಸೆಟ್ಟಿಯ ಮಗ ನಾಗಿಸೆಟ್ಟಿಯ ಹೆಂಡತಿ ತಿಮಾಯಿ ತನ್ನ ಗಂಡ ಸತ್ತಾಗ ಕಿಚ್ಚು ಹಾಯ್ದುಸತ್ತಳೆಂದು ತಿಳಿಸುತ್ತದೆ. ಹುಂಗದ ಸೋವಿ ಶೆಟ್ಟಿಯ ಸೊಸೆ ಸುವಿಯಕ್ಕ ನಿಷಿದ ಯಾದತೆಂದು ತೀರಿಸುತ್ತದೆ.[೧೩] ಆನೆಗೊಂದಿ ಶಾಸನವೊಂದರಲ್ಲಿ ಈ ಎಲ್ಲಾ ವರ್ತಕರು ದಿನ ನಿತ್ಯ ತಮ್ಮ ಆಯುಷ್ಯ ಇರುವವರೆಗೆ ಶಿವಪೂಜೆಗೆ ಮಾಡಬೇಕೆಂದು ತಿಳಿಸಿದೆ.[೧೪] ವರ್ತಕರು ಶ್ರೇಷ್ಠಿಗಳೆಂದು ಪ್ರಸಿದ್ಧರಾಗಿದ್ದರು. ಸೆಟ್ಟಿ ಎಂಬುದು ಶ್ರೇಷ್ಟ ಪದದ ತದ್ಭವ ಇವರಲ್ಲಿ ಹಲವಾರು ಶೈವರಾಗಿದ್ದರು. ಇನ್ನು ಕೆಲವರು ಜೈನರಾಗಿದ್ದರು. ಹೀಗೆ ಅವರು ಒಂದು ವಿಸಿಷ್ಟ ಧಾರ್ಮಿಕ ಸಂಘ ಸೇರಿರಲಿಲ್ಲವಾದದ್ದರಿಂದ ಸಾಮೂಹಿಕವಾಗಿ ಎಲ್ಲರೊಂದಿಗೆ ಸಂಪರ್ಕವನ್ನಿಟ್ಟುಕೊಳ್ಳಲು ಸಾಧ್ಯವಾಯಿತು.

**ಶೂದ್ರರು :**

ಸಮಾಜದ ಕೆಳವರ್ಗದ ವೃತ್ತಿಗಳನ್ನು ಅನುಸರಿಸಿದವರು ಆದ್ದರಿಂದ ಅವರು ಆರ್ಥಿಕವಾಗಿ ಬಡವರಾಗಿದ್ದರು. ಶೂದ್ರರು ಜೀವನ ಕುರಿತಾಗಿ ಶಾಸನಗಳು (ಮೌನವಾಗಿವೆ) ಸಾಮಾನ್ಯವಾಗಿ ಶಾಸನಗಳು ಸಾರ್ವಜನಿಕ ನಿಯಮಾವಳಿಗಳಿಗಳು ಹೆಚ್ಚಾಗಿ ಕಂದಾಯ ನೊಂದಣಿ ದಾಖಲೆಗಳಿಂತಿವೆ. ಇಂಥ ದಾಖಲೆಗಳಲ್ಲಿ ಯಾವುದೇ ವರ್ಗದ ಜನರ ಜೀವನದ ಬಗ್ಗೆ ಹೇಳಲು ಅವಕಾಶವಿಲ್ಲವೆಂದೇ ಹೇಳಬಹುದು. ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಂದು ಅಂಶಗಳು ದೊರಕಬಹುದು. ಈ ದಿಸೆಯಲ್ಲಿ ಆ ಕಾಲದ ಶಿಲ್ಪಗಳು ಈ ವರ್ಗದ ಸ್ಥಿತಿಗತಿಗಳನ್ನು ಗುರುತಿಸಲು ಸ್ವಲ್ಪ ನೆರವಾಗುತ್ತವೆ. ಆನೆಯನ್ನೇರಿದ ಮಾವುತ ಹಾವಾಡಿಸುವ ವಿಲಕ್ಷಣ ಮುಕವಾಡ ಧರಿಸಿ ಕುಣಿಯುವ ವೇಷಗಾರ, ಕಸರತ್ತು ಮಾಡುವ ಡೊಂಬ ದ್ವಾರಪಾಲಕರು ಅರಮನೆಯ ಸೇವಕರು ಮೊದಲಾದವರು ಪರಂಪರೆಯಿಂದ ಬಂದ ವೃತ್ತಿಗಳನ್ನು ಅನುಸರಿಸಿ ರಹಸ್ಯಗಳನ್ನು ಕಾಪಾಡಿಕೊಳ್ಳುವುದರ ಮೂಲಕವಾಗಿ ಆಯಾ ಗುಂಪುಗಳು ನಿರ್ಮಾಣಗೊಂಡವು.

**ಜಾತಿ :**

"ಜನ್ಮನಾ ಜಾಯತೆ ಶೂದ್ರ

ಸಂಸ್ಕಾರಾತ್ ದ್ವಿಜ ವಿಚ್ಚತೇ"

ಹುಟ್ಟುವಾಗ ಎಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆ. ನಂತರ ಜೀವನದಲ್ಲಿ ಸಂಸ್ಕಾರ ಹೊಂದಿದವರು ದ್ವಿಜರಾಗುತ್ತಾರೆ. ಸಂಸ್ಕೃತ ಭಾಷೆಯಲ್ಲಿನ ಈ ಉಕ್ತಿಯಿಂದ ನಮಗೆ ಸ್ಪಷ್ಟವಾಗುವುದೇನೆಂದರೆ ಹುಟ್ಟಿನಿಂದ ಎಲ್ಲರೂ ಸರಿ ಸಮಾನರಾಗಿ ಹುಟ್ಟುತ್ತಾರೆ. ನಂತರ ಗುಣ ಮತ್ತು ವೃತ್ತಿಗಳಿಗನುಗುಣವಾಗಿ ವಿವಿಧ ವರ್ಗಗಳಾಗುತ್ತವೆ.

**ಜಾತಿ ಪದದ ಅರ್ಥ :**

ಜಾತಿ ಎಂಬ ಪದದ ಉತ್ಪತ್ತಿಯು ಇಂಗ್ಲಿಷ್ ಭಾಷೆಯಲ್ಲಿನ 'ಕ್ಯಾಸ್ಟ್' ಎಂಬ ಪದದ ಅನುವಾದವಾಗಿದೆ. ಕ್ಯಾಸ್ಟ್ ಎಂಬ ಪದದ ಉತ್ಪತ್ತಿಯು 'ತಳಿ' ಅಥವಾ ಅನುವಂಶಿಯತೆ ಎಂಬ ಅರ್ಥ ಕೊಡುವ ಸ್ಪಾನಿಶಭಾಷಯಲ್ಲಿನ ಕ್ಯಾಸ್ಟ್ ಎಂಬ ಪದದಿಂದಾಗಿದೆ. ಪೋರ್ಚುಗೀಸ್ ಪದ ಕ್ಯಾಸ್ಟ್ ಎಂಬುದು ತಳಿ ಜನಾಂಗ ಅಥವಾ ಕುಲ ಎಂಬ ಅರ್ಥವನ್ನು ಕೊಡುತ್ತದೆ.

ಜಾತಿಪದ್ಧತಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಅಥವಾ ಶೂದ್ರ ಎಂಬ ೪ ಮೂಲಗಳು ಚತುರ್ವರ್ಣಗಳಿಂದ ಉಗಮಗೊಂಡಿದ್ದು. ಅವು ನೂರಾರು ಉಪಜಾತಿಗಳಾಗಿ ವಿಭಾಗಿಸಲ್ಪಟ್ಟಿವೆ. ಶೂದ್ರರಲ್ಲಿ ಕಂಡುಬರುವ ಪಶು ಪಾಲನೆ ಪ್ರಮುಖ ಕಸುಬಾಗಿರುವ ಯಾದವ ಎಂಬ ಉಪಜಾತಿಯಲ್ಲಿಯೇ ಅಹಿರ್ಸಾ, ಆಹಾರಗಳು, ಗೋಲಾಗಳು, ಗೊಲ್ಲರು ಗೊಪರ ಇದಾಯಿಯನ್ನರು ಎಂಬ ಉಪಜಾತಿಗಳಿವೆ.

ಜಾತಿ ಎನ್ನುವುದು ಆಯಾ ಕೆಲಸಗಳಿಂದ ಗುರುತಿಸಿಕೊಂಡಿವೆ. ನಮ್ಮ ಸಮಾಜದಲ್ಲಿರುವ ಜಾತಿ ವ್ಯವಸ್ಥೆಯನ್ನು ಖಂಡಿಸಿದ ಬಸವಣ್ಣನವರ ವಿಚಾರವನ್ನು ಒಂದು ವಚನದಲ್ಲಿ ನೋಡಬಹುದು.

ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ ಹಾಸವನಿಕ್ಕೆ ಸಾಲಿಗನಾದ ವೆದವ ನೋಡಿ ಹಾರವನಾದ ಎನ್ನುವ ಮಾತು ಸರಿ ಎನಿಸುತ್ತದೆ.

**ಜಾತಿ ವ್ಯವಸ್ಥೆ ವಿಕಾಸ :**

ಕರ್ನಾಟಕ ಸಮಾಜದ ಜಾತಿ ವ್ಯವಸ್ಥೆ ಮತ್ತು ಜಾತಿವ್ಯವಸ್ಥೆಯ ವಿಕಾಸವನ್ನು ಗುರುತಿಸುವುದು ತುಂಬಾ ಕಷ್ಟದಾಯಕವಾದ ಕಾರ್ಯವಾಗಿದೆ. ಅದು ಎಲ್ಲಿ ಹೇಗೆ ಮತ್ತು ಯಾವಾಗ ಹುಟ್ಟಿ ಬೆಳವಣಿಗೆ ಹೊಂದಿ ಸುದೀರ್ಘ ಅವಧಿಯವರೆಗೆ ಸತತವಾಗಿ ಸಾಗಿಬಂದಿತು ಎಂಬು ಬಗ್ಗೆ ಶಾಸ್ತ್ರೀಯ ಮಾಹಿತಿಗಳನ್ನು ಕಂಡುಕೊಳ್ಳುವುದು ತುಂಬಾ ಕಠಿಣವಾದ ಕೆಲಸವಾಗಿದೆ. ಆದಾಗ್ಯು ಜಾತಿ ವ್ಯವಸ್ಥೆಯ ವಿಕಾಸಾತ್ಮಕ ಬೆಳವಣಿಗೆಯನ್ನು ೩ ಕಾಲ ಘಟ್ಟಗಳಲ್ಲಿ ಗುರುತಿಸಬಹುದಾಗಿದೆ. ಅವುಗಳೆಂದರೆ ೧. ಪ್ರಾಚೀನ ಯುಗದ ಜಾತಿ ವ್ಯವಸ್ಥೆ, ೨. ಮಧ್ಯಯುಗದ ಜಾತಿ ವ್ಯವಸ್ಥೆ, ೩. ಆಧುನಿಕ ಯುಗದ ಜಾತಿ ವ್ಯವಸ್ಥೆ

**೧. ಪ್ರಾಚೀನ ಯುಗದ ಜಾತಿ ವ್ಯವಸ್ಥೆ :**

ಪ್ರಾಚೀನ ಯುಗ ಅಂದರೆ ಸುಮಾರು ಕ್ರಿ.ಪೂ. ೧೧೦೦ರವರೆಗಿನ ಅವಧಿಯಲ್ಲಿ ಜಾತಿ ವ್ಯವಸ್ಥೆಯು ಹೇಗೆ ವಿಕಾಸ ಹೊಂದಿತು ಎಂಬ ಬಗೆಗಿನ ವಿವರವನ್ನು ೩ ಮುಖ್ಯ ಉಪ ವಿಭಾಗಗಲ್ಲಿ ಕಂಡುಕೊಳ್ಳಬಹುದಾದಿದೆ. ಆ ಅವಧಿಯಲ್ಲಿಯೇ. ವೇದಗಳ ಕಾಲ ೨. ವೇದೋತ್ತರಕಾಲ ೩. ಪುರಾಣಗಳ ಕಾಲ ಎಂಬುದಾಗಿ ಪರಿಗಣಿಸಲಾಗಿದೆ. ವೇದಗಳ ಕಾಲ ಕ್ರಿ.ಪೂ. ೬೦೦ರವರೆಗಿನ ಕಾಲವನ್ನು ವೇದಗಳ ಕಾಲ ಎಂಬುದಾಗಿ ಕರೆಯಬಹುದಾಗಿದೆ. ಅದನ್ನು ವೇದ ಸಂಹಿತ ಮತ್ತು ಬ್ರಾಹ್ಮಣಗಳ ಕಾಲ ಎಂದು ಕರೆಯಬಹುದಾಗಿದೆ. ಆ ಅವಧಿಯಲ್ಲಿಯೇ ಋಗ್ವೇದ ರಚನೆಯಾಗಿದೆ ಎಂಬುದಾಗಿ ಪರಿಗಣಿಸಲಾಗಿದೆ. ಋಗ್ವೇದದಲ್ಲಿ ಬ್ರಹ್ಮ, ಕ್ಷತ್ರಿ ಮತ್ತು ವಿಶಾ ಎಂಬ ಹೆಸರಿನ ಸಮಾಜದ ೩ ವಿಂಗಡಣೆಗಳ ಪ್ರಸ್ತಾಪವಿರುವುದು ಕಂಡುಬರುವುದು. ಆದರೆ ಪುರುಷ ಸೂಕ್ತದಲ್ಲಿ ಸೃಷ್ಟಿಕರ್ತ ಬ್ರಹ್ಮನ ಬಾಯಿ, ತೋಳುಗಳು, ತೊಡೆಗಳು ಮತ್ತು ಪಾದಗಳಿಂದ ಅನುಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು ಅವಿರ್ಭವಿಸಿದವು. ಎಂಬ ವಿವರಣೆ ಇದೆ. ಶತಪಥ ಬ್ರಾಹ್ಮಣ ತೈತೇರಿಯ ಬ್ರಾಹ್ಮಣ ಮುಂತಾದ ಎಲ್ಲಾ ಪ್ರಾಚೀನ ಹಿಂದೂ ಧರ್ಮ ಗ್ರಂಥಗಳಲ್ಲಿ ಒಂದೇ ಬಗೆಯ ದೈವಿಕ ವಿವರಣೆ ಇದೆ. ಆದರೆ ಈ ಯಾವ ಗ್ರಂಥಗಳಲ್ಲಿಯೂ ಸಹ 'ಜಾತಿ'ಯ ಉಲ್ಲೇಖವಿಲ್ಲ. ವೇದಗಳಲ್ಲಿ ಇವುಗಳನ್ನು ವರ್ಣಗಳು ಎಂಬುದಾಗಿಯೂ ಹೆಸರಿಸಿಲ್ಲ

ವೇದಗಳ ಕಾಲದ ಭಾರತೀಯ ಸಮಾಜದಲ್ಲಿ ವರ್ಣವ್ಯವಸ್ಥೆ ಮಾತ್ರ ಇತ್ತು. ಆದರೆ ಜಾತಿ ವ್ಯವಸ್ಥೆ ಇರಲಿಲ್ಲ. ವರ್ಣ ವ್ಯವಸ್ಥೆಯಲ್ಲಿ ವ್ಯಕ್ತಿಯ ಬಣ್ಣ, ವೃತ್ತಿ ಮತ್ತು ಪ್ರವೃತ್ತಿ ಅಥವಾ ಗುಣಗಾನ ಸ್ವಭಾವಗಳು ಪರಿಗಣಿಸಲ್ಪಡುತ್ತಿದ್ದವು. ವರ್ಣ ವರ್ಣಗಳ ನಡುವೆ ಸಾಮಾಜಿಕ ಚಲನೆ ಸಾಧ್ಯವಿತ್ತು. ವಿವಾಹ, ಊಟೋಪಾಚಾರ, ಪಂಕ್ತಿ ಭೋಜನ, ಸಾಮಾಜಿಕ ಸಂಬಂಧಗಳಿಗೆ ಸಂಬಂಧಿಸಿದಂತೆ

ವಿಧಿನಿಷೇಧಗಳಿರಲಿಲ್ಲ. ವರ್ಣವ್ಯವಸ್ಥೆಯಲ್ಲಿ ಉಚ್ಚ-ನೀಚ-ಭಾವನೆಗಳಾಗಲೀ ಶ್ರೇಷ್ಠ ಕನಿಷ್ಠಗಳಾಗಲಿ ಇರಲಿಲ್ಲ.

**೨. ವೇದೋತ್ತರ ಕಾಲದ ಜಾತಿವ್ಯವಸ್ಥೆ :**

ವೇದೋತ್ತರ ಕಾಲ ಅಂದರೆ ಕ್ರಿ.ಪೂ ೬೦೦ ಕ್ರಿ.ಶ. ೩೦೦ರವರೆಗಿನ ಕಾಲದಲ್ಲಿ ಜಾತಿ ವ್ಯವಸ್ಥೆಗೆ ಸಂಬಂಧಿಸಿದಂತೆ ಕೆಲವಾರು ಮಾಹಿತಿಗಳನ್ನು ಗುರುತಿಸಬಹುದಾಗಿದೆ. ೩ ಬಗೆಯ ಸಾಹಿತ್ಯದಲ್ಲಿ ಮಾಹಿತಿಗಳನ್ನು ಗಮನಿಸಬಹುದು. ಅವುಗಳೆಂದರೆ ೧ ಹೆಚ್ಚು ಧರ್ಮನಿಷ್ಠವಾದ ಹಾಗೂ ಆದರ್ಶದಾಯಕ ದೃಷ್ಟಿಯುಳ್ಳ ಆರ್ಯರ ಪವಿತ್ರ ನಿಯಮಗಳು ಮತ್ತು ಪ್ರಮಾಣ ಗ್ರಂಥಗಳು, ೨. ಸಮಕಾಲೀನ ಆಚರಣೆಗಳನ್ನು ಪ್ರತಿಬಿಂಬಿಸುವ ಮಹಾಕಾವ್ಯಗಳು, ೩. ಬೌದ್ಧ ಸಾಹಿತ್ಯ

ಆರ್ಯರ ಪವಿತ್ರ ನಿಯಮಗಳು ಮತ್ತು ಪ್ರಮಾಣ ಗ್ರಂಥಗಳು ಆಶ್ರಮಗಳು ಪುರುಷಾರ್ಥಗಳು, ವರ್ಣಧರ್ಮ, ಪ್ರಾಯಶ್ಚಿತ ವಿಧಿಗಳು ಉತ್ತರಾಧಿಕಾರದ ನಿಯಮಗಳು, ವಾರಸುದಾರಿಕೆಯ ನಿಯಮಗಳು ಈ ಬಗ್ಗೆ ಮಾಹಿತಿ ಒದಗಿಸುತ್ತವೆ. ಡಾ.ಜಿ.ಎಸ್.ಘುರೆರವರು ಅಭಿಪ್ರಾಯಪಟ್ಟಿರುವಂತೆ ಬ್ರಾಹ್ಮಣ ವರ್ಣ ಮತ್ತು ಇತರ ವರ್ಣಗಳ ನಡುವೆ ಭೇದ ಕಲ್ಪಿಸುವ ಪರಿಪಾಠ ಈ ಹಂತದಲ್ಲಿ ನಿಧಾನವಾಗಿ ಆರಂಭವಾಗಿದೆ. ವರ್ಣಗಳು ಪರಸ್ಪರ ಬೆರೆಯುವುದನ್ನು ತಪ್ಪಿಸುವುದು ಒಂದು ಆದರ್ಶದಾಯಕ ಅಗತ್ಯ ಎಂಬುದಾಗಿ ಪರಿಗಣಿಸಲಾಗಿದೆ. ಬ್ರಾಹ್ಮಣ ವರ್ಣದವರಿಗೆ ಸಂಬಂಧಿಸಿದ ಅಂತಸ್ತು ಮತ್ತು ವೃತ್ತಿಗಳನ್ನು ಅನ್ಯವರ್ಣಗಳು ಅನುಸರಿಸದಂತೆ ನಿಷೇಧಿಸಲಾಗಿದೆ.

ಈ ಅವಧಿಯಲ್ಲಿ ಬ್ರಾಹ್ಮಣರ ಹಿಡಿತ ಸಮಾಜದ ಮೇಲೆ ಬಲವಾಗುತ್ತಾ ನಡಿದಿತ್ತು. ಶೂದ್ರ ವರ್ಣದವರ ಸ್ಥಿತಿ ದುಸ್ಥಿತಿಗಿಳಿಯುತ್ತಾ ಸಾಗಿತ್ತು. ಬ್ರಾಹ್ಮಣರು ಎಲ್ಲ ವಿಷಯದಲ್ಲಿ ತಾವು ಮೇಲು ಎಂಬುದಾಗಿ ತೋರಿಸಿಕೊಳ್ಳುತ್ತಿದ್ದರು. ಉಳಿದ ಜಾತಿಯವರು ಹೇಗೆ ನಡೆದುಕೊಳ್ಳಬೇಕು ಮತ್ತು ಯಾವ ಯಾವ ಕರ್ತವ್ಯಗಳನ್ನು ನಿರ್ವಹಿಸಬೇಕು ಎಂದು ಬ್ರಾಹ್ಮಣರು ಹೆಚ್ಚಿನ ಆದ್ಯತೆ ಪಡೆಯುತ್ತಿದ್ದರು. ಬ್ರಾಹ್ಮಣ ಜಾತಿಯೇ ಪ್ರಧಾನವಾದುದು. ಉಳಿದವು ಅದರ ವಿಕೃತ ರೂಪಗಳು ಎಂಬುದಾಗಿ ಮಹಾಕಾವ್ಯಗಳಲ್ಲಿ ಒಂದಾದ ಮಹಾಭಾರತದಲ್ಲಿ ಉಲ್ಲೇಖವಿದೆ.

ಸ್ಮೃತಿಕಾರ ಗೌತಮ ತನ್ನ ಸ್ಮೃತಿಯಲ್ಲಿಹೀಗೆ ತಿಳಿಸಿದ್ದಾನೆ. ಎಲ್ಲಾ ವರ್ಣಗಳು ತಮಗಿಂತಲೂ ಶ್ರೇಷ್ಠರಾದವರಿಗೆ ಸೇವೆ ಸಲ್ಲಿಸಬೇಕು. ಬ್ರಾಹ್ಮಣರಿಗೆ ಬ್ರಾಹ್ಮಣರು ಮಾತ್ರ ಅಧ್ಯಾಪಕರಾಗಬೇಕು. ಉಳಿದ ವರ್ಣದವರು ಅವರಿಗೆ ಬೋಧಿಸಲು ಅರ್ಹರಲ್ಲ ಬ್ರಾಹ್ಮಣರಿಗೆ ಎಲ್ಲಾ ಬಗೆಯ ತೆರಿಗೆಯಿಂದ ವಿನಾಯಿತಿ ನೀಡಲಾಗಿತ್ತು. ನಂತರದ ಅವಧಿಯಲ್ಲಿ ಶೂದ್ರರ ಸ್ಥಿತಿ ದಿನಗಳೆದಂತೆ ದುಸ್ಥಿತಿಗೆ ದೂಡಲ್ಪಟ್ಟಿತ್ತು. ಅವರು ಇತರರ ಸೇವೆ ಮಾಡಲೆಂದೇ ಆ ದೇವರು ತನ್ನ ಪಾದದಿಂದ ಸೃಷ್ಟಿಸಿದ್ದಾನೆ. ಎಂಬುದಾಗಿ ಒತ್ತಿ ಹೇಳಲಾಗಿದೆ. ಇತರ ವರ್ಣದವರು ಶೂದ್ರ ವರ್ಣದವರನ್ನ ಅನ್ನ ವಸ್ತ್ರ ಮುಂತಾದವುಗಳನ್ನು ಕೊಟ್ಟು ಸಲಹಬೇಕು. ಶೂದ್ರರು ಎದುರು ವೇದಗಳನ್ನು ಪಠಿಸಬಾರದು. ಅವರಿಗೆ ಯಾವ ಉಪದೇಶಗಳನ್ನು

ನೀಡಕೂಡದು. ಅವರಿಗೆ ಪವಿತ್ರ ನಿಯಮಗಳು ತಿಳಿದಿರಕೂಡದು. ಅವರು ವಿವಾಹ ಸಂಸ್ಕಾರವನ್ನು ಮಾತ್ರ ಅನುಸರಿಸಬೇಕು. ಉಳಿದ ಸಂಸ್ಕಾರಗಳನ್ನು ಮಾಡಲು ಅರ್ಹರಲ್ಲ. ಅವರಿಗೆ ಯಾವುದೇ ಬಗೆಯ ನಾಗರಿಕ ಹಕ್ಕುಗಳಾಗಲಿ ಧಾರ್ಮಿಕ ಹಕ್ಕುಗಳಾಗಲಿ ಇರಬೇಕಾದ ಅಗತ್ಯವಿಲ್ಲ.

**೩. ಪುರಾಣದ ಕಾಲದಲ್ಲಿ ಜಾತಿ ವ್ಯವಸ್ಥೆ :**

ಕ್ರಿ.ಪೂ. ೩೦೦ ರಿಂದ ಕ್ರಿ.ಶ. ೧೧೦೦ರವರೆಗಿನ ಪುರಾಣಗಳ ಕಾಲದಲ್ಲಿ ಜಾತಿ ವ್ಯವಸ್ಥೆ ಬಹಳ ಮಟ್ಟಿಗೆ ಅಧಿಕೃತ ಸ್ವರೂಪ ಪಡೆದಿರುವುದನ್ನು ಗುರುತಿಸಬಹುದಾಗಿದೆ. ಈ ಅವಧಿಯಲ್ಲಿ ಬ್ರಾಹ್ಮಣರ ಶ್ರೇಷ್ಠತೆಯನ್ನು ಸ್ಥಾಪಿಸಲಾಗಿದೆ. ಇತರ ಜಾತಿಗಳವರು ಬ್ರಾಹ್ಮಣರನ್ನು ಆಶ್ರಯಿಸಿ ಬದುಕುವುದೇ ಪರಮ ಶ್ರೇಷ್ಠ ಕರ್ತವ್ಯ ಎಂಬ ಭಾವನೆ ಹಾಗೂ ನಂಬಿಕೆಗಳನ್ನು ಬಿತ್ತಿ ಬೆಳೆಸಲಾಗಿದೆ. ೪ ಜಾತಿಗಳನ್ನು ಪರಸ್ಪರ ಪ್ರತ್ಯೇಕಿಸುವ ಯತ್ನ ವ್ಯಾಪಕವಾಗಿ ನಡೆದಿದೆ. ಊಟೋಪಾಚಾರಗಳು ಸಾಮಾಜಿಕ, ಸಂಬಂಧಗಳು ವೈವಾಹಿಕ ಮಾರ್ಪಾಟುಗಳು ಆಯಾ ಜಾತಿಯ ಚೌಕಟ್ಟಿನ ಒಳಗೆ ನಡೆಯಬೇಕು ಎಂಬ ನಿರ್ಬಂಧಗಳನ್ನು ವಿಧಿಸಲಾಗಿದೆ. ಆ ಬಗೆಯ ಸಾಮಾಜಿಕ ಕ್ರಮವೇ ಇರುವಂತೆ ನೋಡಿಕೊಳ್ಳಬೇಕು ಎಂಬುದು ರಾಜನ ಹೊಣೆಗಾರಿಕೆಯ ಆಗಿತ್ತು. ಆ ಅವಧಿಯಲ್ಲಿ ಸ್ಮೃತಿಕಾರರು ಕೇವಲ ೪ ಜಾತಿಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. ಆದರೆ ಮಿಶ್ರ ಜಾತಿಗಳ ಬಗ್ಗೆ ಹಾಗೂ ಬಹಿಷ್ಕೃತ ಜಾತಿಗಳ ಬಗ್ಗೆ ಪ್ರಸ್ತಾಪ ಮಾಡಿಲ್ಲ. ಧರ್ಮ ಎಂಬುದನ್ನು ಸಹ ವರ್ಣಗಳಿಗೆ ಅನುಸಾರವಾಗಿಯೇ ವ್ಯಾಖ್ಯಾನಿಸಲಾಗಿದೆ. ಧರ್ಮದ ಬಗ್ಗೆ ಬ್ರಾಹ್ಮಣರಿಗೆ ಪೂರ್ಣವಾಧಿಕಾರವಿದೆ. ಕ್ಷತ್ರಿಯರಿಗೆ ಮುಕ್ಕಾಲು ಪಾಲು ಅಧಿಕಾರವಿದೆ. ವೈಶ್ಯರಿಗೆ ಅರ್ಧ ಪಾಲು ಅಧಿಕಾರವಿದೆ. ಶೂದ್ರರಿಗೆ ಕಾಲು ಪಾಲು ಮಾತ್ರ ಅಧಿಕಾರವಿದೆ. ಮಿಶ್ರ ಜಾತಿಯವರು ಅಂದರೆ ೪ ಜಾತಿಗಳಲ್ಲಿ ನಿಷೇಧಿತವಾದ ಅಂತರ್‌ಜಾತಿಯ ವಿವಾಹದಿಂದ ಜನಿಸಿದರು. ಬಡಗಿ ಅಂದರೆ ಮರದ ಕೆಲಸಗಳನ್ನು ಮಾಡುವುದು ರಥಕಾರ ಅಂದರೆ ರಥವನ್ನು ನಡೆಸುವುದು ಕಮ್ಮಾರ ಅಂದರೆ ಕಬ್ಬಿಣದ ಕೆಲಸಗಳನ್ನು ಮಾಡುವುದು, ಚಾರಣ ಅಂದರೆ ಹಾಡುಗಳನ್ನು ಕಟ್ಟಿಹಾಕುವುದು ಮುಂತಾದವುಗಳನ್ನು ಅನುಸರಿಸಬೇಕಾಗಿತ್ತು.

**೪. ಮಧ್ಯಕಾಲೀನ ಯುಗದಲ್ಲಿ ಜಾತಿ ವ್ಯವಸ್ಥೆ :**

ಮಧ್ಯಕಾಲೀನ ಯುಗ ಅಂದರೆ ಸುಮಾರು ಕ್ರಿ.ಶ. ೧೧೦೦ ರಿಂದ ಕ್ರಿ.ಶ. ೧೭೦೦ರವರೆಗಿನ ಕಾಲಾವಧಿಯಲ್ಲಿ ಜಾತಿವ್ಯವಸ್ಥೆ ಒಂದಷ್ಟು ಅವಧಿ ಅತ್ಯಂತ ಉನ್ನತ ಮಟ್ಟದಲ್ಲಿ ಸುಧಾರಣೆಗೊಂಡಿತು. ಮತ್ತು ಅನಂತರದ ಅವಧಿ ಗಣನೀಯವಾಗಿ ಆಘಾತಕ್ಕೆ ಗುರಿಯಾಯಿತು. ಆ ರೀತಿಯ ಪರಿಸ್ಥಿತಿಗಳನ್ನು ಈ ಮುಂದಿನಂತೆ ವಿವರಿಸಲಾಗಿದೆ.

ಕ್ರಿ.ಶ. ೧೨ನೆಯ ಶತಮಾನದ ಆದಿ ಭಾಗದಲ್ಲಿ ಸಾಂಪ್ರದಾಯಿಕ ಹಿಂದೂ ಸಮಾಜವು ವರ್ಣವ್ಯವಸ್ಥೆ ಮತ್ತು ಜಾತಿಪದ್ಧತಿ ಹಾಗೂ ಅಸ್ಪೃಶ್ಯತೆಯ ಕಲುಷಿತ ಕಟ್ಟುಪಾಡುಗಳಿಂದ ತತ್ತರಿಸಿ ಹೋಗಿತ್ತು. ಸಮಾಜದಲ್ಲಿ ಜಾತಿ ಕುಲಗಳು ಮಾರಕವಾಗಿದ್ದವು. ಹುಟ್ಟು ಮತ್ತು ಕೆಲವರು ವಿಶಿಷ್ಟ ಸಂಸ್ಕಾರಗಳ ಆಧಾರದ ಮೇಲೆ ಮೇಲು - ಕೀಳು - ಉಚ್ಚ - ನೀಚ ಸ್ಪೃಶ್ಯ ಮೊದಲಾದ ಭಾವನೆಗಳನ್ನು ಮಾನವ ಮಾನವರ ವ್ಯವಸ್ಥೆಯನ್ನಾಧರಿಸಿದ ಸಾಮಾಜಿಕ ಸ್ತರ ವಿನ್ಯಾಸವು ಸಮಾಜದಲ್ಲಿ ನೆಮ್ಮದಿಯಿಂದಿರಲಿಲ್ಲ.

ಅಸಮಾಧಾನವನ್ನು ಹೆಚ್ಚಿಸಿ ಒಗ್ಗಟ್ಟು ನಾಶವಾಗಲು ಕಾರಣವಾಯಿತು. ಮಾನವ ಧರ್ಮವನ್ನು ಅಪಾರವಾಗಿ ಪುರಸ್ಕರಿಸಿದರು. "ಕುಲವನೋಳ್ಪಡೆ ಹುರುಳಿಲ್ಲವೆಂದು ತಿಳಿಸಿ ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾಗಿ ಒಂದೆ ಎಂದು ಸಾರಿದರು. ವೃತ್ತಿಯ ಉಚ್ಚ ನೀಚ ಭಾವನೆಗಳನ್ನು ಬಸವಣ್ಣನವರು ಕಟುವಾಗಿ ಟೀಕಿಸಿದರು. ಕಾಯಕವೇ ಕೈಲಾಸ ಎಂಬುದಾಗಿ ಸಾರಿ ಹೇಳಿದರು. ಕಾಯಕ ಮತ್ತು ಹುಟ್ಟಿನಿಂದ ಜಾತಿ ಕುಲಗಳು ನಿರ್ಮಾಣವಾಗಲಾರವೆಂಬುದು ಅವರ ಸ್ಪಷ್ಟ, ಖಚಿತ ಹಾಗೂ ದಿಟ್ಟ ಅಭಿಪ್ರಾಯವಾಗಿತ್ತು.

ಕುಲ ಕುಲವೆನ್ನುವರೆಗೆ "ಕುಲವೊಂದೇ ತನ್ನ ತಾನರಿದಂತೆ" ಎಂದು

ಅವರವರ ಆಚಾರ ಮತ್ತು ಅರಿವಿನಿಂದ ಮಾತ್ರ ಕುಲ ಬರುವುದೆಂದು ದಾಸರು ಸೂಚಿಸಿದರು

ಕೊಲ್ಲುವವನೆ ಮಾದಿಗ ಹೊಲಸು ತಿಂಬುವವನೇ ಹೊಲೆಯ?

ಕುಲವೇನೋ ಅವಂದಿರ ಕುಲವೇನೋ?

ಸಕಲ ಜೀವಾತ್ಮರಿಗೆ ಲೇಸನೆ ಬಯಸುವ

ನಮ್ಮ ಕೂಡಲಸಂಗಮನ ಶರಣರೇ ಕುಲಜರು!

ಬಸವಣ್ಣನವರು ತಮ್ಮ ಈ ವಚನದಲ್ಲಿ ಸಾರಿ ಹೇಳಿರುವಂತೆ ಕೊಲ್ಲುವವನೆ ಮಾದಿಗ, ಹೊಲಸು ತಿನ್ನುವವನೇ ಹೊಲೆಯ ಮಾನವರನ್ನು ಕೇವಲ ಹುಟ್ಟಿನಿಂದಾಗಲೀ, ಲಿಂಗದಿಂದಾಗಲೀ, ವರ್ಣದಿಂದಾಗಲೀ, ಜಾತಿಯಿಂದಾಗಲೀ ಮೇಲು - ಕೀಳು - ಉಚ್ಚ - ನೀಚ ಎಂದು ಭಾವಿಸದೆ ಅವರವರ ಗುಣಗಳಿಂದ ವ್ಯಕ್ತಿತ್ವವನ್ನು ಅಳೆಯುವುದೇ ಸೂಕ್ತವಾದುದು.

ಹೀಗೆ ಪ್ರಾಚೀನ ಕಾಲದಲ್ಲಿಯೇ ೧೮ ಜಾತಿಗಳು ಪ್ರಕಟಿತದಲ್ಲಿದ್ದ ವಿಷಯ ಶಾಸನ ಮತ್ತು ಕಾವ್ಯಗಳಲ್ಲಿ ಸಾಂಪ್ರದಾಯವಾಗಿ ಉಲ್ಲೇಖಗೊಂಡಿವೆ. ಸಾಮಾನ್ಯವಾಗಿ ಹರಿಜನರು ವಾಸಿಸುತ್ತಿದ್ದ ಪ್ರದೇಶವನ್ನು ಹೊಲಗೇರಿ ಅಥವಾ ಕೇರಿ ಎಂದು ಕರೆಯಲಾಗುತ್ತದೆ. ಇವರು ಊರು ಹೊರಗೆ ವಾಸಿಸುತ್ತಿದ್ದರು.

ಹೀಗೆ ಸಮಾಜದಲ್ಲಿ ಜಾತಿ ವ್ಯವಸ್ಥೆಯ ಬಗ್ಗೆ ನಡೆಸುವ ಕೀಳರಿಮೆಗಳು ಹಲವಾರು. ಈ ಜಾತಿ ವರ್ಗಗಳ ಬಗ್ಗೆ ಹೀಗೆಯೇ ಎಂದು ನಿಖರವಾಗಿ ಹೇಳುವುದು ಕಷ್ಟ ಏಕೆಂದರೆ ಒಬ್ಬೊಬ್ಬ ಮನುಷ್ಯನು ಒಂದು ಜಾತಿಯನ್ನು ನಿರ್ಮಿಸಿಕೊಂಡಿರುವುದು ಇಂದಿಗೂ ಕಂಡುಬರುತ್ತದೆ. ಆದರೆ ಶಾಸನಗಳು ಹೆಚ್ಚು ಮೇಲ್ವರ್ಗದವರ ಬಗೆಗೆ ವಿವರಣೆಯನ್ನು (ಕೊಟ್ಟಂತೆ) ಉಲ್ಲೇಖಿಸಿದಂತೆ ಕೆಳವರ್ಗದವರ ಉಲ್ಲೇಖಗಳು ಶಾಸನಗಳಲ್ಲಿ ತೀರಾ ಕಡಿಮೆ.

**ಶ್ರಮಿಕ ವರ್ಗ :**

ವಿವಿಧ ವೃತ್ತಿಗಳಲ್ಲಿ ಶ್ರಮಿಸಿದ ಕುಶಲಕರ್ಮಿಗಳನ್ನು ಶ್ರಮಿಕ ವರ್ಗಗಳೆಂದು ಗುರುತಿಸಬಹುದು. ಇಲ್ಲಿಯ ಶಾಸನಗಳಲ್ಲಿ ಉಲ್ಲೇಖಗೊಂಡ ಆಧಾರದಿಂದ ಶ್ರಮಿಕ ವರ್ಗವನ್ನು ಅಕ್ಕಸಾಲಿಗ, ಕಮ್ಮಾರ,

ಕುಂಬಾರ, ಕಲ್ಲುಕುಟಿಗ (ಶಿಲ್ಪಿ) ಬಡಿಗ ಹೀಗೆ ಮುಂತಾದವರನ್ನು ನೋಡಬಹುದು. ಈ ಕುಶಲಕರ್ಮಿಗಳು ತಮ್ಮ ವಂಶ ಪಾರಂಪರೆಯಾಗಿ ಬಂದ ಕೆಲಸವನ್ನು ಮುಂದುವರಿಸಿಕೊಂಡು ಬಂದವರು.

**೧. ಅಕ್ಕಸಾಲಿಗರು :**

ಅಕ್ಕಸಾಲಿಗರು ಆಯವಾಗಿ ಬಂದಿದ್ದ ಧಾನ್ಯವನ್ನು ದಾನ ನೀಡಬೇಕು ಎಂದು ಉಲ್ಲೇಖವಿದೆ. ಇದರಿಂದ ಪ್ರಾಚೀನ ಕಾಲದಲ್ಲಿಯೂ ಅಕ್ಕಸಾಲಿಗರು ತಮ್ಮ ಕೆಲಸಗಳಿಗೆ ಧವಸ ಧಾನ್ಯಗಳನ್ನು ತೆಗೆದುಕೊಳ್ಳುತ್ತಿದ್ದರು. ಅಂದರೆ ವರ್ಷಕ್ಕೆ ಇಂತಿಷ್ಟು ಜೋಳ, ರಾಗಿ ಅಥವಾ ನವಣೆ, ಹೀಗೆ ಬಂದಿರುವುದನ್ನು ತನಗೆ ಬೇಕಾದಷ್ಟು ಇಟ್ಟುಕೊಂಡು ಉಳಿದನ್ನು ದಾನವಾಗಿ ನೀಡುತ್ತಿದ್ದರು.

**ಮೀನುಗಾರರು :**

ಮೀನುಗಾರಿಕೆ ಇದೆ ಎಂದಾದರೆ ಆ ವೃತ್ತಿಯನ್ನು ಹೊಂದಿರುವ ಜಾತಿಗಳಿರುತ್ತವೆ. ಇಂದು ಕರ್ನಾಟಕದಲ್ಲಿ ಬೆಸ್ತ ಅಂಬಿಗರಲ್ಲದೆ ಇತರ ಅನೇಕ ಸಮುದಾಯದವರು ಮೀನುಗಾರಿಕೆಯಿಂದ ಜೀವಿಸುತ್ತಿದ್ದಾರೆ. ಮೀನುಗಾರಿಕೆ ಇಂದು ಕುಲಕಸುಬು ಆಗಿಲ್ಲ. ವಾಣಿಜ್ಯ ವೃತ್ತಿಯಾಗಿ ಮಾರ್ಪಾಟಾಗಿದೆ. ಪ್ರಾಚೀನ ಕಾಲದಲ್ಲಿ ಗಂಗಮತಸ್ಥರು, ಕಬ್ಬಲಿಗ, ಕಬ್ಬೇರ, ಬಾರಿಕ, ಬೇಸ್ತರು ಗಂಗಪುತ್ರ, ಮೊಗವೀರ, ಮುಂದಾರು, ಮತ್ತು ಅಂಬಿಗ ಮತ್ತಿತರು ಮೀನು ಹಿಡಿಯುವ ವೃತ್ತಿಯಲ್ಲಿದ್ದವರು.

**ಅಂಬಿಗರು (ಅಂಬಿಗತನ) :**

'ಅಂಬಿಗ' ಎನ್ನುವುದು ಕರ್ನಾಟಕದಲ್ಲಿರುವ ಒಂದು ಸಮುದಾಯ. ಇವರಿಗೆ ಗಂಗೆ ಮಕ್ಕಳು ಕಬ್ಬೇರ, ಗಂಗಮತಸ್ಥ, ಬಾರಿಕೇರ, ಬೆಸ್ತ, ಕಿಳ್ಳೆಕ್ಯಾತರು ಮೊದಲಾದ ಹೆಸರುಗಳಿಂದ ಕರೆಯಲಾಗುತ್ತದೆ. ವಿಜಯನಗರ ಕಾಲದಲ್ಲಿ ಸುಣಗಾರ, ಜಾಲಗಾರ, ಗಂಗಮತಸ್ಥ ಮಡೇರ, ಮೊದಲಾದವರು ಅಂಬಿಗ ವೃತ್ತಿಯನ್ನು ಪರಿಪಾಲಿಸುತ್ತಿದ್ದರು. ಇವರಿಗೆ ಅರಸರು ಪ್ರೋತ್ಸಾಹ ನೀಡಿದ ಉಲ್ಲೇಖಗಳಿವೆ. ಅಂಬಿಗರ ಐಕ್ಯತೆ ಒಕ್ಕೂಟಗಳು ನಿರ್ಮಾಣಗೊಂಡಿದ್ದವು. ಆಗಿನ ಕಾಲಕ್ಕೆ ಅಂಬಿಗ ವೃತ್ತಿಯು ಅಷ್ಟೇನು ಲಾಭದಾಯಕವಾಗರಲಿಲ್ಲ. ಏಕೆಂದರೆ ರಾಜನು ಇಂತಿಷ್ಟು ಭೂಮಿ ಇತರ ಸವಲತ್ತುಗಳನ್ನು ಅಂಬಿಗರಿಗೆ ನೀಡಿದ್ದರಿಂದ ಸಾಧು ಸಂತರ ರಾಜ್ಯದ ಅಧಿಕಾರಿಗಳು ಮತ್ತು ಉನ್ನತ ವರ್ಗದವರು ಇವರ ಕರ ವಸೂಲಿ ಮಾಡುವಂತಿರಲಿಲ್ಲ. ಆನೆಗೊಂದಿ ಶಾಸನವೊಂದರಲ್ಲಿ ಸದಾಶಿವರಾಯನು ಆನೆಗೊಂದಿಯ ಅಂಬಿಗರ ನಾಗಜೋಗಿ ಮತ್ತು ಬಸವ ಜೋಗಿಯವರಿಗೆ ತುಂಗಭದ್ರಾ ನದಿಯ ಎರಡು ದಂಡೆಗಳಾದ ಆನೆಗೊಂದಿ ಮತ್ತು ತಳವಾರ ಕಟ್ಟೆಯಲ್ಲಿ ೧೦ ಹರಗೋಲು ೧೦ ಮಂದಿ ಅಂಬಿಗರು ನಿರಂತರವಾಗಿ ಕಾರ್ಯನಿರತರಾಗಿದ್ದು ರಾಜನಿಗೆ ವಿಜ್ಞಾಪನೆ ಮಾಡಿಕೊಂಡಲ್ಲಿ ರಾಜನು ಇವರಿಗೆ ಆನೆಗೊಂದಿಯಲ್ಲಿ ೧೫ ಕೊಳಗ ನೀರು ಭೂಮಿ ತಳವಾರಕೋಟೆಯಲ್ಲಿ ೧೫ ಕೊಳಗ ನೀರು ಭೂಮಿ ಒಟ್ಟು ೩೦ ಕೊಳಗ ನೀರು ಭೂಮಿಯನ್ನು ನೀಡಿ ಇದರ ಆದಾಯವನ್ನು ಇವರು ಅನುಭವಿಸುತ್ತಾ ಬ್ರಾಹ್ಮಣ ಸಾಧುಸಂತರ ಸೇವೆ ಮಾಡಿಕೊಂಡಿರಬೇಕೆಂದು ಮಕ್ಕಳು ಮೊಮ್ಮಕ್ಕಳವರೆಗೂ ಆಚಂದ್ರಾರ್ಕನಾಗಿ ಕಟ್ಟೆಮನೆ ಅಧಿಕಾರ ಕುಲಾಚಾರ ಜವಾಬ್ದಾರಿಯನ್ನು ಕೊಟ್ಟ ಬಗ್ಗೆ ತಿಳಿಸುತ್ತದೆ ಆನೆಗೊಂದಿಯ ಶಾಸನದಲ್ಲಿ ಆನೆಗೊಂದಿ ಸಂಸ್ಥಾನದವರು ಅಂಬಿಗರು ಬರಮ ಮತ್ತು ಬಸವ ಎಂಬುವವರಿಗೆ ನೀಡಿದ ಸನ್ನಿಧಿನಲ್ಲಿ ಸಂಸ್ಥಾನದ ಕಾರ್ಯವನ್ನು ದಕ್ಷತೆಯಿಂದ

ಮಾಡುತ್ತಿರುವುದರಿಂದ ಇವರಿಗೆ ತುಂಗಭದ್ರಾ ನದಿಯಲ್ಲಿ ೫ ಹರಗೋಲು ಬುಟ್ಟಿ ಗಳಿದ್ದು ಅವುಗಳಲ್ಲಿ ಎರಡು ಬುಟ್ಟಿಗಳನ್ನು ಇನಾಂ ಆಗಿ ನೀಡಿರುತ್ತಾರೆ. ಆನೆಗೊಂದಿಯ ಮತ್ತೊಂದು ಶಾಸನವೊಂದರಲ್ಲಿ ಸದಾಶಿವರಾಯನ ಆಳ್ವಿಕೆಯಲ್ಲಿ ೩೦೦ ಮಂದಿ ಅಂಬಿಗರು ಮಹಾಲಿಂಗ ಒಡೆಯರಿಗೆ ಹಣದಾನ ನೀಡಿ ಉಲ್ಲೇಖವಿದೆ. ಆನೆಗೊಂದಿಯ ಮತ್ತೊಂದು ಶಾಸನದಲ್ಲಿ ತಿಮರಾಜಯನ ಕಾಲದಲ್ಲಿ ಅಂಬಿಗರಿಗೆ ರಾಮಾಪುರದಲ್ಲಿ ಒಂದು ಖಂಡುಗ ಗದ್ದೆಯನ್ನು ನೀಡಿದ್ದು ಇದನ್ನು ಶ್ರೀ ರಂಗರಾಜರಾಯನು ಮುಂದುವರಿಸಿಕೊಂಡು ಹೋಗುವಂತೆ ತಿಳಿಸುತ್ತಾನೆ.

**ಹಡಪದವರು :**

ಹಡಪದ ಎನ್ನುವುದು ಕರ್ನಾಟಕದಲ್ಲಿ ಒಂದು ಜಾತಿ. ಇವರು ರಾಜರ ಕೈಯಲ್ಲಿ ಕೆಲಸ ಮಾಡುವುದು. ಇವರಿಗೆ ರಾಜರು ಪ್ರೋತ್ಸಾಹವನ್ನು ನೀಡಿದ ಶಾಸನಗಳಲ್ಲಿ ಉಲ್ಲೇಖ ಕಂಡುಬರುತ್ತದೆ. ಏಕೆಂದರೆ ಇವರ ವೃತ್ತಿ ಯಾವುದೇ ಲಾಭದಾಯಕವಲ್ಲದ ವೃತ್ತಿಯಾಗಿದ್ದರಿಂದ ಅರಸರು ಇವರಿಗೆ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ. ಇವರ ಮೇಲೆ ಅಧಿಕಾರಿಗಳು ಯಾವುದೇ ಕರ ವಸೂಲಿ ಮಾಡುವಂತಿಲ್ಲ. ಕನಕಗಿರಿ ಶಾಸನವೊಂದರಲ್ಲಿ ಸದಾಶಿವರಾಯ ಆಳ್ವಿಕೆಯಲ್ಲಿ ಇವನ ಮಾಂಡಳಿಕನಾದ ಮಹಾ ಮಂಡಳೇಶ್ವರ ಅಳಿಯ ತಿರುಮಲರಾಜನು ನಾವಿಂದರಾದ ತಿಂಮೋಜ ಕೊಂಡೋಜ ಕನಕಗಿರಿಯು ಬಿಟ್ಟು ಬಿಡಾರ ತೆರಿಗೆಯನ್ನು ಪಡೆದುಕೊಳ್ಳುತ್ತಾರೆ. ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ ಸದಾಶಿವರಾಯನು ಆಳ್ವಿಕೆ ಮಾಡುತ್ತಿದ್ದು ಅವನ ಕಾರ್ಯಕರ್ತನಾದ ಶ್ರೀ ರಂಗರಾಮರಾಜ ದೇವರ ಕ್ಷೌರಿಕರಾದ ತಿಂಮೋಜ, ಕೊಂಡೊಜ, ಭದ್ರೋಜರಿಗೆ ದಾನ ನೀಡಿದ ವಿವರ ಇದೆ. ಆನೆಗೊಂದಿ ಶಾಸನವೊಂದರಲ್ಲಿ ಅಚ್ಯುತರಾಯನ ಆಳ್ವಿಕೆ ಕಾಲದಲ್ಲಿ ಅಚ್ಯುತ ದೇವರಾಯನಿಗೆ ಪುಣ್ಯವಾಗಲೆಂದು ಅವನ ಚವರದ ಕೋನಪ್ಪ ನಾಯಕ ಮಗ ಮಾಧ್ಯಯ ಮತ್ತು ಪೆನುಗೊಂಡೆಂದ ನಾಗೈಯನ್ನು ಬಸವರಾಜ ದೇವರಿಗೆ ದಿನನಿತ್ಯ ನೈವೇದ್ಯ ಸಲುವಾಗಿ ಅರವಟ್ಟಿಗೆ ನಿರ್ಮಿಸಿದ್ದನು.

**ಕುಂಬಾರ :**

ಕರ್ನಾಟಕದಲ್ಲಿ ಇದು ಒಂದು ಸಮುದಾಯ ಇವರು ವ್ಯಾಪಾರ ವೃತ್ತಿಯನ್ನು ಅವಲಂಬಿಸಿದರು. ಇವರ ಬಗ್ಗೆ ಶಾಸನಗಳಲ್ಲಿ ಉಲ್ಲೇಖ ಕಂಡುಬರುತ್ತದೆ. ಆನೆಗೊಂದಿ ಶಾಸನವೊಂದರಲ್ಲಿ ಕುಂಬಾರರ ಹೆಗ್ಗಳಿಕೆ ಹೇಳುವ ಶಾಸನವಾಗಿದೆ. ಕುಂಬಾರರು ಗಿರಿಜೆಯ ಕುಲಕ್ಕೆ ಸರಿದವರು ಎಂದು ತಿಳಿಸುತ್ತದೆ.

**ಹೊಲೆ ಮಾದಿಗರು :**

ಹೊಲೆ ಮಾದಿಗರು ಪ್ರಾಚೀನ ಕಾಲದಿಂದಲೂ ಬಂದವರು. ಇವರು ಊರಿನ ಹೊರಗಡೆ ವಾಸಿಸುತ್ತಿದ್ದರು. ಇವರ ವಾಸಸ್ಥಳಕ್ಕೆ ಕೇರಿ ಎಂದು ಕರೆಯುತ್ತಾರೆ. ಇವರು ಎಲ್ಲಾ ಜಾತಿಗಿಂತ ಕೀಳು ಜಾತಿ ವರ್ಗದವರು. ಇವರ ಬಗ್ಗೆ ಚಿಕ್ಕ ಜಂತಗಲ್ ಶಾಸನವೊಂದರಲ್ಲಿ ಮಲ್ಲಜಗಲಿಯ ಮತ್ತು ತಂತಾಜಗಲಿಯ ಲಖಾಜಗಲಿಯ ಮೂರು ಜನ ಸೇರಿಕೊಂಡು ಹಸುಮಾಜಗಲಿ, ಮಾದಿಗ ಉಡುಪಜಗಲಿಗೆ ಚಿಕ್ಕಜಿಂತಗಲ್ ಗ್ರಾಮದ ಕೆಲವು ಪ್ರದೇಶಗಳನ್ನು ದಾಪ ನೀಡಿದ ಉಲ್ಲೆಖವಿದೆ.

**ಕುಟುಂಬ ವ್ಯವಸ್ಥೆ :**

ಕುಟುಂಬವು ಸಮಾಜದ ಒಂದು ಅಂಗ. ಇದು ಸಾಮಾಜಿಕ ವ್ಯವಸ್ಥೆಯ ಪ್ರಥಮ ಘಟಕವಾಗಿದೆಯೆನ್ನಬಹುದು. ಗಂಡು ಹೆಣ್ಣುಗಳು ಗಂಡ ಹೆಂಡತಿಯಾಗಿರುವ ಒಂದು ಸಾಮಾಜಿಕ ವ್ಯವಸ್ಥೆಗೆ ವಿವಾಹ ಎನ್ನುತ್ತೇವೆ. ವಿವಾಹದ ಮುಂದಿನ ಹಂತ ಕುಟುಂಬ.

ಕುಟುಂಬ ಎಂಬ ಪದವು ಇಂಗ್ಲಿಷ್ ಭಾಷೆಯ 'ಫ್ಯಾಮಿಲಿ' ಎಂಬ ಪದದ ಅನುವಾದವಾಗಿದೆ. ಫ್ಯಾಮಿಲಿ ಎಂಬ ಪದ 'ಸೇವಕ' ಎಂಬ ಅರ್ಥಕೊಡುವ 'ಫಾಮುಲಸ್' ಎಂಬ ರೋಮನ್ ಪದದಿಂದ ಉತ್ಪತ್ತಿಯಾಗಿದೆ. ಬಹುಶಃ ಅಂದಿನ ದಿನಗಳಲ್ಲಿ ರೋಮನ್ ನಿಯಮದಂತೆ ಆಳುಗಳನ್ನು ಮನೆಯ ಸದಸ್ಯರೆಂದೆ ಪರಿಗಣಿಸುತ್ತಿರುವಾಗ ಈ ಪದ ಉಪಯೋಗಿಸಲ್ಪಟ್ಟಿದೆ.

ಕುಟುಂಬದ ಬಗ್ಗೆ ಶಾಸನಗಳಲ್ಲಿ ವಿವಾಹ ಜೀವನದ ಬಗೆಗೆ ಉಲ್ಲೇಖಿಸಿರುವುದು ಕಂಡುಬರುತ್ತದೆ. ಮತ್ತು ಮದುವೆ ಮಾಡುವದರ ಫಲವಾಗಿ ಸ್ಥಳೀಯ ದೇವಾಲಯಗಳಿಗೆ ದಾನದತ್ತಿಗಳನ್ನು ತೆರಿಗೆಗಳನ್ನು ನೀಡಿರುವುದನ್ನು ಉಲ್ಲೇಖಿಸಿರುತ್ತವೆ. ಚಿಕ್ಕಜಂತಗಲ್ ಶಾಸನವೊಂದರಲ್ಲಿ ಮಲ್ಲಜಗಲಿಯ ಮತ್ತು ತಂತಜಗಲಿಯ ಲಖಾಜಗಲಿಯ ೩ ಜನ ಸೇರಿಕೊಂಡು ಹನುಮಜಗಲಿ, ಮಾದಿಗ ಉಡುಪು ಜಗಲಿಗೆ ಇವರಿಗೆ ಚಿಕ್ಕಜಂತಗಲ್ ಗ್ರಾಮದ ಕೆಲವು ಪ್ರದೇಶಗಳನ್ನು ದಾನ ಪಡೆದ ವಿಷಯ ತಿಳಿಸುತ್ತದೆ. ಮಲ್ಲಿ ಜಗಲಿ, ತಂತಜಗಲಿ, ಲಖಾಜಗಲಿ ಇವರು ೩ ಜನ ಸೇರಿಕೊಂಡು ಲಖಾಯಿ ಮತ್ತು ಗದಾಯಿ ಇವರಿಬ್ಬರಿಗೆ ಮದುವೆ ಮಾಡಿದರು ಎಂದು ಉಲ್ಲೇಖವಿದೆ. ಇದರಿಂದ ಇವರ ಸಂಬಂಧ ಚೆನ್ನಾಗಿರಲೆಂದು ಹೇಳಿದ್ದನ್ನು ಗಮನಿಸಬಹುದು.[೨೪] ಕುಟುಂಬ ವ್ಯವಸ್ಥೆಯಲ್ಲಿ ತಾಯಿಯ ಪಾತ್ರ ಮಹತ್ವದ್ದು. ಏಕೆಂದರೆ ಯಾವಾಗಲು ತನ್ನ ಮಕ್ಕಳಿಗೆ ಗಂಡನಿಗೆ ಒಳ್ಳೆದಾಗಲಿ ಅಂತ ಕ್ಷಣ ಕ್ಷಣ ತನ್ನ ಕರ್ತವ್ಯವನ್ನು ಇವರಿಗಾಗಿಯೇ ಮುಡುಪಾಗಿ ಇಡುತ್ತಾಳೆ. ಅದರಲ್ಲೂ ಪುರುಷ ಪ್ರಧಾನ ಸಮಾಜದಲ್ಲಿ ತನ್ನ ಮಗನಿಗಿಂತ ತನ್ನ ಜೀವನವನ್ನು ಸವೆಸುತ್ತಾಳೆ. ಹೀಗೆ ಸಮಾಜದಲ್ಲಿ ದಾಂಪತ್ಯ ರಕ್ತಸಂಬಂಧ ಪ್ರೀತಿ ಪ್ರೇಮ ಇವುಗಳಿಗೆ ತಾಯಿಯ ಮಮತೆ ಗಾಢವಾಗಿರುತ್ತದೆ. ಇಂತಹ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಈ ಶಾಸನದಲ್ಲಿ ತನ್ನ ಮಕ್ಕಳ ಸಂರಕ್ಷಣೆ ಸಲುವಾಗಿ ದಾನನೀಡಿದ ಉಲ್ಲೇಖ ಕಂಡುಬರುತ್ತದೆ.

ಆನೆಗೊಂದಿ ಶಾಸನವೊಂದರಲ್ಲಿ ತಿರುಮಲರಾಯನ ಆಳ್ವಿಕೆಯ ಕಾಲದಲ್ಲಿ ಶ್ರೀ ವೀರ ಶಿವಾಜಿ ಮಾಡುವ ವಿಜ್ಞಾಪನೆ ಏನೆಂದರೆ ನಿಮ್ಮ ತಂದೆ ಅಂದರೆ ರಾಜ ತಿರುಮಲರಾಜ ತಂದೆಯಾದ ಶ್ರೀರಂಗರಾಜ ರಾಜ್ಯವು ಅನ್ಯಕ್ರಾಂತವಾಗಿ ಆತನು ಪರಸ್ಥಳದಲ್ಲಿ ಮೃತ್ಯನಾದ. ಇನ್ನು ಮುಂದೆ ನಿಮ್ಮ ಸಂರಕ್ಷಣೆಯಾಗಬೇಕೆಂದು ರಾಜ ತಿರುಮಲರಾಜನ ತಾಯಿಯಾದ ಮಾತೃಶ್ರೀ ತಿಮ್ಮೋಜ ಅಮ್ಮನು ನಿನ್ನನ್ನು ರಾಮರಾಯನ ವಕೀಲ ವೆಂಕಟಕೃಷ್ಣನ ಸಂಗರ ಬಳಿಗೆ ಕಳುಹಿಸುತ್ತಾರೆ. ಹೀಗಾಗಿ ಅಲ್ಲಿನ ಸಂಗತಿಗಳನ್ನೆಲ್ಲಾ ತಿಳಿದು ನಿಮ್ಮ ಸಂರಕ್ಷಣಾರ್ಥವಾಗಿ ಈ ಕೆಳಗೆ ನಮೂದಿಸಿದ ತಾಲೂಕುಗಳನ್ನು ನಿಮಗೆ ನೀಡಲಾಗಿದೆ ಎಂದು ಉಲ್ಲೇಖವಿದೆ.[೨೫] ಹಿರೆಜಂತಗಲ್ ಶಾಸನವೊಂದರಲ್ಲಿ ತಳರಿಯ ಚೆನ್ನಯ್ಯ ಅವನ

ಮಗ ಪ್ರಭದ್ಯೆಯ ಇವನ ಪತ್ನಿ ನಾಗಮ್ಮ ಇವರ ಮಕ್ಕಳು ಮರಳು ಸಂಕರದೇವ ನಾಗಪಯ್ಯ ಮತ್ತು ವೀರಮ್ಮನ ಹೆಸರನ್ನು ಸೂಚಿಸುತ್ತದೆ.[೨೬] ಅಂದರೇ ಶಾಸನದಲ್ಲಿ ಕುಟುಂಬದ ಸದಸ್ಯರ ಹೆಸರು ಕಂಡುಬರುತ್ತದೆ.

ಹೀಗೆ ಕುಟುಂಬದಲ್ಲಿ ಧಾನ್ಯಗಳಾದ ನೆಲ್ಲು, ಲವಣ, ಬಾಡುಕಾಯಿ ಇವುಗಳನ್ನು ತನ್ನ ಪುತ್ರ ಪೌತ್ರ ಪರಂಪರೆಯಿಂದ ದಾನ ಬಿಟ್ಟರು. ಇದರಿಂದ ತಾಯಂದಿರು ತಮ್ಮ ಮಕ್ಕಳಿಗೆ ಒಳ್ಳೆಯದಾಗುವುದಾದರೆ ಏನೆಲ್ಲಾ ತ್ಯಾಗ ಕಷ್ಟಗಳನ್ನು ಸಹಿಸುತ್ತಿದ್ದರೆಂದು ತಿಳಿದುಬರುತ್ತದೆ.

**ಸ್ತ್ರೀಯರ ಸ್ಥಾನಮಾನ :**

ಕರ್ನಾಟಕ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು ಪ್ರಾಚೀನ ಕಾಲದಿಂದ ಇಂದಿನವರೆಗೂ ಒಂದೇ ಪ್ರಕಾರದಲ್ಲಿ ಇಲ್ಲದೆ ವಿವಿಧ ಸ್ವರೂಪಗಳಲ್ಲಿ ವ್ಯಕ್ತವಾಗಿರುವುದನ್ನು ಕಂಡುಬರುತ್ತದೆ. ಪ್ರಾಚೀನ ಯುಗ, ಮಧ್ಯಯುಗ ಮತ್ತು ಆಧುನಿಕ ಯುಗಗಳಲ್ಲಿ ಸ್ತ್ರೀಯರ ಸ್ಥಾನಮಾನಗಳು ಏರುಪೇರುಗಳನ್ನು ಅವ್ಯಾಹತವಾಗಿ ಅನುಭವಿಸಿರುವುದು. ಒಂದು ಕಾಲದಲ್ಲಿ ಸ್ತ್ರೀ ದೇವರಿಗೆ ಸಮೀಪವಾದ ಸ್ಥಾನಮಾನವನ್ನು ಪಡೆದು ಪೂಜಿಸಲ್ಪಟ್ಟ ರೀತಿಯಲ್ಲಿ ವ್ಯವಹರಿಸಲ್ಪಟ್ಟಿದ್ದಾರೆ. ಮತ್ತೊಂದು ಕಾಲದಲ್ಲಿ ಪುರುಷರ ಕೈಗೊಂಬೆಯಾಗಿ ಪರಿಗಣಿಸಲ್ಪಟ್ಟಿದ್ದಾಳೆ ಎಂದು ಹೇಳಬಹುದು.

**ವೇದಗಳ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನ :**

ವೇದಗಳ ಕಾಲದ ಪೂರ್ವಾಭಾಗದಲ್ಲಿ ಪುರುಷನೊಡನೆ ಸ್ತ್ರೀಯರ ವ್ಯವಹಾರದ ಮೇಲೆ ವಿಪರೀತ ಕಟ್ಟುಕಟ್ಟಳೆಗಳಿರಲಿಲ್ಲ. ಪತಿಯು ಗಂಡನನ್ನು ಕಳೆದುಕೊಂಡರೆ ಆತನ ಅಣ್ಣಂದಿರಾಗಲೀ ಮತ್ತು ತಮ್ಮಂದಿರಾಗಲೀ ಆಕೆಯನ್ನು ವಿವಾಹವಾಗಬಹುದಿತ್ತು. ವೇದಗಳ ಕಾಲದ ಆರಂಭದಲ್ಲಿ ಹೆಂಡತಿ ಹಿಂದೂ ಸಮಾಜದಲ್ಲಿ ಸ್ತ್ರೀಯರಿಗೆ ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಪುರುಷರಷ್ಟೇ ಸರಿಸಮಾನವಾದ ಸ್ಥಾನಮಾನಗಳಿದ್ದವು. ಸ್ತ್ರೀ ಪುರುಷನ ಅರ್ಧಾಂಗಿನಿ ಎಂದು ಶತಪಥ ಬ್ರಾಹ್ಮಣದಲ್ಲಿ ತಿಳಿಸಲಾಗಿದೆ. ಪತ್ನಿಯನ್ನು ಸತಿಯ ಸಹಧರ್ಮಿಣಿ ಎಂದು ಪರಿಗಣಿಸಲಾಗಿದೆ.

**ಮನುವಿನ ದೃಷ್ಟಿಯಲ್ಲಿ ಮಹಿಳೆ :**

ಮನುವ ಸ್ತ್ರೀಯರ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಸುದೀರ್ಘ ವಿವರಣೆ ನೀಡಿದ್ದಾನೆ. ಈ ಬಗೆಗಿನ ಆತನ ಅಭಿಪ್ರಾಯಗಳು ಹೆಚ್ಚಿನ ವಾದವಿವಾದಗಳಿಗೆ ಒಳಗಾಗಿರುವುದು ನಿಜವಾದರೂ ಪರಿಶೀಲನಾರ್ಹವಾಗಿದೆ.

'ಪಿತಾರಕ್ಷತಿ ಕೌಮಾರೇ ಭರ್ತಾರಕ್ಷತಿ ಯೌವನೇ||

ರಕ್ಷಂತಿ ಸ್ಥವಿರೇ ಪುತ್ರಾನ ಸ್ತ್ರೀ ಸ್ವಾತಂತ್ರ ಮನರ್ಹತಿ||"

ಮನುವಿನ ಅಭಿಪ್ರಾಯದಂತೆ ಸ್ತ್ರೀಯನ್ನು ಬಾಲ್ಯದಲ್ಲಿ ತಂದೆ ಯೌವನದಲ್ಲಿ ಪತಿ ಮತ್ತು ಮುಪ್ಪಿನಲ್ಲಿ ಮಕ್ಕಳು ಸಂರಕ್ಷಿಸುತ್ತಾರೆ. ಆದುದರಿಂದ ಸ್ತ್ರೀಯ ಸ್ವಾತಂತ್ರ್ಯವಹಿಸುವ ಪ್ರಮೇಯವಿಲ್ಲ.

ಮತ್ತೊಂದು ಶ್ಲೋಕದಲ್ಲಿ

"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೆ ತತ್ರ ದೇವತಾ||

ಯತ್ರತಾಸ್ತುನ ಪೂಜ್ಯಂತೆ ಸರ್ವಾಸ್ತೆ ಫಲಾ ಕ್ರಿಯಾ||"

ಎಲ್ಲಿ ಸ್ತ್ರೀ ಯಥಾಸಕ್ತಿ ಪೋಷಿಸಲ್ಪಟ್ಟು ಸುಖವಾಗಿಡಲ್ಪಟ್ಟು ಪೂಜಿಸಲ್ಪಡುತ್ತಾರೆ, ಅಲ್ಲಿ ದೇವತೆಗಳ ಸುಪ್ರಸನ್ನರಾಗಿರುತ್ತಾರೆ ಮತ್ತು ಪಿತೃಗಳ ಸಂತೋಷವು ಲಭಿಸಿ ಧನದಾನ್ಯ ಸಂಪತ್ತು ವೃದ್ಧಿಯಾಗುತ್ತದೆ.

**ಮಹಾಕಾವ್ಯಗಳ ಕಾಲ :**

ರಾಮಾಯಣ ಮತ್ತು ಮಹಾಭಾರತಗಳ ಕಾಲವನ್ನು ಮಹಾಕಾವ್ಯಗಳ ಕಾಲ ಎಂಬುದಾಗಿ ಕರೆಯುತ್ತೇವೆ. ಆ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು ಗಮನಾರ್ಹವಾಗಿ ಉತ್ತಮವಾಗಿದ್ದವು. ಸ್ತ್ರೀಯರ ಸ್ಥಾನಮಾನಗಳು ಪುರುಷರಿಗೆ ಸರಿಸಮಾನವಾಗಿದ್ದವು. ಅವರು ಸಾಕಷ್ಟು ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದರು. ಸೀತೆ, ದ್ರೌಪದಿ, ಅಹಲ್ಯ, ತಾರಾ ಮತ್ತು ಮಂಡೋದರಿ ಇವರನ್ನು ಪಂಚ ಪತಿವ್ರತೆಯರೆಂದು ಪರಿಗಣಿಸಲಾಗಿದೆ. ರಾಮಾಯಣದಲ್ಲಿ ಬರುವ ಸ್ತ್ರೀಯರಾದ ಅನುಸೂಯೆ, ಶಬರಿ, ಕೌಸಲ್ಯ, ಸುಮಿತ್ರ, ಸೀತೆ ಮೊದಲಾದ ಪಾತ್ರಗಳು ಗಮನಾರ್ಹವಾದವುಗಳಾಗಿವೆ. ಮಹಾಭಾರತದಲ್ಲಿ ಬರುವ ಗಾಂಧಾರಿ, ದ್ರೌಪದಿ, ಸಾವಿತ್ರಿ ಮೊದಲಾದ ಪಾತ್ರಗಳು ತುಂಬಾ ಗಮನಾರ್ಹವಾದವುಗಳಾಗಿವೆ. ಪತಿ ಕುರುಡನಾದ ಮೇಲೆ ಗಾಂಧಾರಿ ಕಣ್ಣಿನ ಸುಖ ಬೇಡವೆಂದು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಜೀವನವನ್ನು ಸಾಗಿಸಿದಳು. ದ್ರೌಪದಿ ತನ್ನ ಪತಿಗಳೈವರಲ್ಲಿ ಇಬ್ಬರಾದ ಧರ್ಮರಾಯ ಮತ್ತು ಭೀಮಸೇನರಿಗೆ ವಿಶೇಷ ನೀತಿ ನಡವಳಿಕೆಗಳ ಬಗ್ಗೆ ವಿವೇಕಯುತ ಹಿತವಚನ ನೀಡಿದಳು.

**ಬುದ್ಧನ ನಂತರದಲ್ಲಿ :**

ಸ್ತ್ರೀಯರ ಸ್ಥಾನಮಾನದ ದೃಷ್ಟಿಯಿಂದ ಬುದ್ಧನ ಕಾಲವು ತುಂಬಾ ಮಹತ್ವಪೂರ್ಣವಾದುದಾಗಿದೆ. ಬುದ್ಧನ ಕಾಲದಲ್ಲಿ ಸ್ತ್ರೀ ಪುರುಷರಿಗೆ ಸಮಾನತೆ ಇತ್ತು ಧರ್ಮಾಚರಣೆಯಲ್ಲಿ ಸ್ತ್ರೀ ಪುರುಷರಿಬ್ಬರೂ ಸಮಾನ ಅವಕಾಶಗಳಿದ್ದವು. ಕಾಳಿದಾಸ ಕೃತಿಗಳಲ್ಲಿ ಸ್ತ್ರೀಯರ ಭಾವನಾಪೂರ್ಣ ಚಿತ್ರಣವಿದೆ. ಮಿಥಿಲ ನಗರದ ಮಂಡನಮಿಶ್ರನ ಪತ್ನಿ ಭಾರತಿ ಮೊದಲಾದ ಸ್ತ್ರೀ ತತ್ವಜ್ಞಾನಿಗಳೊಡನೆ ಅದ್ವೈತ ಮತ ಸಂಸ್ಥಾಪಕ ಶಂಕರಾಚಾರ್ಯರು ತಾತ್ವಿಕ ಚರ್ಚೆಯಲ್ಲಿ ಪಾಲ್ಗೊಂಡ ನಿದರ್ಶನವಿದೆ. ಹೊಯಂತ್ಸಾಂಗ್ ಪ್ರಕಾರ ಹರ್ಷವರ್ಧನ ಸೋದರಿಯಾದ ರಾಜೇಶ್ರಿಯು ಕಾನೂನು ಶಾಸ್ತ್ರವನ್ನು ಕಲಿತಳು ಎಂದು ಉಲ್ಲೇಖವಿದೆ.

ಮಧ್ಯಕಾಲೀನ ಕರ್ನಾಟಕದಲ್ಲಿ ಸ್ತ್ರೀಯರು ಸಾಮಾಜಿಕ ಕ್ಷೇತ್ರಗಳಲ್ಲಿ ಭಾಗಿಯಾಗುತ್ತಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ. ೧೨ನೆಯ ಶತಮಾನದಲ್ಲಿ ಹಿಂದೆಂದೂ ಇಲ್ಲದ ಸಂಖ್ಯೆಯಷ್ಟು ಮಹಿಳೆಯರು ಸಾರ್ವಜನಿಕ ಕ್ಷೇತ್ರದಲ್ಲಿ ಕಾಣಿಸಿಕೊಂಡಿರುವುದು ಗಮನಿಸಬಹುದು. ಸ್ತ್ರೀಯರು ಲಿಂಗದೀಕ್ಷೆ ಪಡೆದು ಲಿಂಗಪೂಜೆಯನ್ನು ಪುರುಷರಂತೆಯೇ ಅವರಿಗೆ ಸರಿಸಮಾನವಾಗಿ ಕೈಗೊಳ್ಳಬೇಕೆಂದು ಬಸವೇಶ್ವರರು ಉಪದೇಶಿಸಿದರು.

**ದಾಂಪತ್ಯ :**

ನಮ್ಮ ಪರಂಪರೆ ಸಂಪ್ರಾದಯದಲ್ಲಿ ಆದರ್ಶ ದಾಂಪತ್ಯಕ್ಕೆ ಒಂದು ಮುಖ್ಯ ಸ್ಥಾನವನ್ನು ಕೊಟ್ಟಿದ್ದೇವೆ. ಸತಿಪತಿಗಳೊಂದಾದ ಭಕ್ತಿಹಿತವಾದ್ದು "ಶಿವಂಗೆ" ಎಂಬ ದಾಸಿಮಯ್ಯನ ಮಾತಿನಂತೆ[೨೦] ದೇವತೆ ದೇವರಿಗೆ ಒಟ್ಟಾಗಿ ಪೂಜೆ ಆಹುತಿಗಳನ್ನಾರ್ಪಿಸುವ ದಂಪತಿಗಳು ಸಹಬಾಳ್ವೆಯಿಂದ ಇದ್ದರೆಂದು ಶಾಸನದಲ್ಲಿ ಉಲ್ಲೇಖಿವಿರುವುದು ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ ದಾನದತ್ತಿಗಳು ಕೂಡಿ ನೀಡಿದ ವಿವರವು ಬಂದಿದೆ. ಪತಿಯೊಬ್ಬನೇ ಈ ಕೆಲಸವನ್ನು ಕೈಗೊಳ್ಳದೆ ಪತಿಯ ಸಮ್ಮತಿಯೊಂದಿಗೆ ಇಬ್ಬರು ಕೈಗೂಡಿ ದಾನ ನೀಡಿದ್ದಾರೆ. ಕನಕಗಿರಿ ಶಾಸನವೊಂದರಲ್ಲಿ ಕನಕಗಿರಿ ವುಡಚಿನಾಯಕನ ಹೆಂಡತಿ

ಅಂದರೆ ವುಡಸಿ ನಾಯಕನ ಹೆಂಡತಿ ಚಿನ್ನಮ್ಮ ಬಸವಣ್ಣ ದೇವಾಲಯವನ್ನು ಸಂಪೂರ್ಣವಾಗಿ ಕಟ್ಟಿಸಿದ್ದರು ಎಂದು ತಿಳಿದುಬರುತ್ತದೆ.[೨೧]

ಅದೇ ಗ್ರಾಮದ ಮತ್ತೊಂದು ಶಾಸನದಲ್ಲಿ[೨೨]

೨ನೆಯ ವುಡಸಿ ನಾಯಕನ ಹೆಂಡತಿ ಚಿಂನಾಜಮ್ಮ ಕನಕಗಿರಿ ಸ್ವಾಮಿಯ ಪೌಳಿಗೆ ಕಲ್ಲು ಹಾಸಿಗೆ ಹಾಕಿಸಿದಳು ಎಂದು ತಿಳಿದುಬರುತ್ತದೆ. ಅದೇ ಊರಿನ ಮತ್ತೊಂದು ಶಾಸನವೊಂದರಲ್ಲಿ ಗುಜ್ಜಲ ಇಮ್ಮಡಿ ವುಡಸಿ ನಾಯಕನ ಪತ್ನಿ ಚಿಣ್ಣಮ್ಮನ ಕನಕರಾಯನ ಕೆರೆಯನ್ನು ಕಟ್ಟಿಸಿದಳು. ವುಡಸಿನಾಯಕನ ಹೆಂಡತಿ ಕನಕಮ್ಮ ಬಾವಿಯನ್ನು ಕಟ್ಟಿಸಿದಂತೆ ತಿಳಿಸುತ್ತದೆ.[೨೩]

ಹೀಗೆ ದಾಂಪತ್ಯದಿಂದ ಕೂಡಿಕೊಂಡು ಸತಿಪತಿಯೊಂದಿಗೆ ದಾನದತ್ತಿಗಳನ್ನು ನೀಡಿರುವುದು ಶಾಸನಗಳಲ್ಲಿ ಕಂಡುಬಂದಿದೆ. ಹೀಗೆ ಮಕ್ಕಳಿಗೊಸ್ಕರ ಪತಿಯರು ತಾಯಂದಿರು ತಮ್ಮ ದಾಂಪತ್ಯ ಜೀವನದ ಸಾರ್ಥಕತೆಗೆ ಮಕ್ಕಳ ಭವಿಷ್ಯಕ್ಕೆ ದೇವರುಗಳಿಗೆ ಹರಕೆ ದಾನ ದತ್ತಿಗಳನ್ನು ಬಿಟ್ಟಿರುವುದು ಪ್ರಾಚೀನ ಕಾಲದ ಆದರ್ಶವಾಗಿತ್ತೆಂದು ಆನೆಗೊಂದಿ ಶಾಸನಗಳಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಇಂದಿಗೂ ಸಹ ಮಕ್ಕಳ ಶ್ರೇಯೋವೃದ್ಧಿಗಾಗಿ ತಾಯಂದಿರು ದೇವರಿಗೆ ಹರಕೆ ಪೂಜೆ ಪುನಸ್ಕಾರಗಳನ್ನು ಮಾಡಿಸುತ್ತಾರೆ.

**ವೈಶ್ಯೆಯರು :**

ವೈಶ್ಯೆ ಎಂದರೆ ಸೂಳೆ, ದೇವದಾಸಿ ಎಂದರ್ಥ ಕೊಡುತ್ತದೆ. ಆದರೆ ಈಗ ಅರ್ಥ ಬದಲಾಗಿದೆ. ವೇದಗಳ ಕಾಲದಲ್ಲಿ ವೇಶ್ಯ ಪದ್ಧತಿ ಸಾಮಾನ್ಯವಾಗಿತ್ತು. ವೇದಗಳಲ್ಲಿ ಇವರನ್ನು 'ಗಣಿಕೆ' ಯರೆಂದು ಉಲ್ಲೇಖಿಸಲಾಗಿದೆ. ಪ್ರಾಚೀನ ಕಾಲದಲ್ಲಿ ವೇಶ್ಯಾವೃತ್ತಿಯ ಇತಿಹಾಸವು ಸ್ತ್ರೀ ಮತ್ತು ಪುರುಷ ಸಂಬಂಧಷ್ಟೇ ಹಳೆಯದು. ಬುದ್ಧನ ಹಾಗೂ ಮೌರ್ಯರ ಕಾಲದಿಂದಲೂ ಪ್ರಕಟಿತವಿದ್ದ ವೇಶ್ಯವೃತ್ತಿಯು ಯಾವುದೇ ಬಗೆಯ ಸಾಮಾಜಿಕ ಕಳಂಕಕ್ಕೆ ಒಳಗಾಗದೆ ಒಂದು ಅಂಗೀಕೃತ ಸಾಮಾಜಿಕ ಸಂಸ್ಥೆಯಂತೆ ಶತಮಾನಗಳಿಂದಲೂ ನಡೆದುಕೊಂಡು ಬಂದಿತ್ತು. ದೇವರಸೇವೆಗಾಗಿ ಬಿಟ್ಟಂತಹ "ದೇವದಾಸಿಯರು" ಎಂಬ ಹೆಸರಿನಿಂದ ಉತ್ತರ ಭಾರತದಲ್ಲಿ "ಮಂಗಲ ಮುಖಿಯರು" ಎಂಬ ಹೆಸರಿನಿಂದ ರಾಜನ ಸೇವೆಯಲ್ಲಿ ತೊಡಗಿದ "ರಾಜನರ್ತಕಿಯರು" ನೃತ್ಯಗಾತಿಯರು ಗಾಯಕಿಯರು ಎಂಬ ಹೆಸರಿನಿಂದ ಸಂಪ್ರದಾಯದ ನೆಲೆಯಲ್ಲಿ ಮುಡಿಪಿಟ್ಟಿದ "ಜೋಗತಿಯರು", "ಬಸವಿಯರು", "ನಿತ್ಯ ಸುಮಂಗಲಿಯರು" ಎಂಬ ಹೆಸರಿನಿಂದ

ಶ್ರೀಮಂತರು ಮತ್ತು ಪ್ರತಿಷ್ಠಿತರ ಸೇವೆಗಾಗಿ ತೊಡಗಿದ್ದ "ಗಣಿಕೆಯರು" ಅಥವಾ "ವಾರಂಗನೆಯರು ನಾಯಕಸಾನಿಯರು" ಎಂಬ ಹೆಸರಿನಿಂದ ಅದೆಷ್ಟೋ ಸ್ತ್ರೀಯರು ವೇಶ್ಯಾವೃತ್ತಿಯನ್ನು ಅವಲಂಬಿಸಿಕೊಂಡು ಬಂದಿದ್ದರು. ರಾಜಮಹಾರಾಜರು ಹಾಗೂ ಕುಲೀನ ಶ್ರೀಮಂತರುಗಳ ಮಟ್ಟದಲ್ಲಿ ಅತಿಥಿ ಸತ್ಕಾರ ಹಾಗೂ ಅವರ ಮನೋರಂಜನೆಗಾಗಿ "ಗಣಿಕೆ"ಯರನ್ನು ಮತ್ತು ದಾಸಿಯರನ್ನು ಕಳಿಸುತ್ತಿದ್ದರು. 'ಮನುಸ್ಮೃತಿ' 'ಅರ್ಥಶಾಸ್ತ್ರ' ಹಾಗೂ 'ಕಾಮಶಾಸ್ತ್ರ'ಗಳಂತಹ ಪುರಾತನ ಗ್ರಂಥಗಳಲ್ಲಿ ಕೂಡ ವೇಶ್ಯಾವೃತ್ತಿಯ ಬಗ್ಗೆ ಹಲವಾರು ಉಲ್ಲೇಖಗಳಿರುವುದರನ್ನು ಗಮನಿಸಬಹುದಾಗಿದೆ. ಇವುಗಳಿಗೂ ಪೂರ್ವದ "ರಾಮಾಯಣ", "ಮಹಾಭಾರತ"ದಂತಹ ಮಹಾಕಾವ್ಯಗಳಲ್ಲಿ ಹಾಗೂ ಪುರಾಣಗಳಲ್ಲಿ ಕೂಡ ರಂಬೆ, ಊರ್ವಶಿ, ಮೇನಕಾ, ತಿಲೋತ್ತಮೆ, ದೇವನರ್ತಕಿಯರ ಅರ್ಥಾತ್ ಮನವನ್ನು ತಣಿಸಲು ಹಾಗೂ ರಂಜಿಸಲು ಇದ್ದಂತಹ ದೇವಾಂಗನೆಯರ ಬೆಳೆದುಬಂದಿತ್ತು ಎಂದೆನ್ನಬಹುದು. ಚಾಲುಕ್ಯರ ಕಾಲದಲ್ಲಿ ಚಾಲುಕ್ಯರ ವಿನಯಾದಿತ್ಯನ ಕಾಲದಲ್ಲಿ ಇವನ ತಂಗಿಯಾದ ಮಹಾದೇವಿ ಅರಸ ಪ್ರೀತಿಗೆ ಪಾತ್ರವಾಗಿದ್ದು ರಾಜನರ್ತಕಿಯಾಗಿದ್ದಳೆಂದು ಬರುತ್ತದೆ. ಇವಳನ್ನು (ವಿನಾಪೊಟಿ) 'ವೀಣಾಪೊತಿ' ಎಂದು ಕರೆಯಲಾಗಿದೆ. ಇದರಿಂದ ಇವರ ಕಾಲದಲ್ಲಿಯೇ ಮೊದಲು ನರ್ತಕಿಯಾಗಿದ್ದು ಕಂಡುಬರುತ್ತದೆ. ಅಂದರೆ ೭ನೆಯ ಶತಮಾನದಲ್ಲಿ ರಾಜ ಮನೆತನದವರೇ ನರ್ತಕಿಯಾಗಿದ್ದ ಅದು ಚಾಲುಕ್ಯ ಮನೆತನದ ರಾಣಿಯೇ ಮೊದಲು ಎಂದು ಹೇಳಬಹುದು. ಈ ಅವಧಿಯಲ್ಲಿ ಅವರು ಸಾಮಾಜಿಕವಾಗಿ, ಆರ್ಥಿಕವಾಗಿ ಉನ್ನತ ಮತ್ತು ಗೌರವ ಸ್ಥಾನ ಪಡೆದಿದ್ದರು. ದೇವಾಲಯಗಳಲ್ಲಿ ಅಂಗಭೋಗ ಮತ್ತು ರಂಗಭೋಗಗಳ ಸೇವೆಯಲ್ಲಿ ಸ್ತ್ರೀಯರನ್ನು ನೇಮಿಸುತ್ತಿದ್ದರು.

**ಮಧ್ಯಕಾಲೀನ ಯುಗದಲ್ಲಿ :**

ಮಧ್ಯಯುಗದಲ್ಲಿ ಆಳುತ್ತಿದ್ದ ಮುಸ್ಲಿಂ ದೊರೆಗಳಂತೂ ಮದ್ಯಪಾನ ಮತ್ತು ವೇಶ್ಯಾಪದ್ಧತಿಗೆ ಬಹಳಷ್ಟು ಮಹತ್ವ ನೀಡಿದರು. ಮುಸ್ಲಿಂ ಆಡಳಿತಗಾರ 'ಜನಾನಾಖಾನೆ'ಗಳಲ್ಲಿ ಎಷ್ಟೋ ಮಂದಿ ವೇಶ್ಯೆಯರು ಮುಸ್ಲಿಂ ದೊರೆಗಳಿಗೆ ಹಾಗೂ ಸರದಾರಗಳಿಗೆ 'ಉಪಪತ್ನಿ'ಯಾಗಿಯೂ ಇರುತ್ತಿದ್ದರು. ಸೇವೆಗಾಗಿ ಬಿಡುವ ಸ್ತ್ರೀಯರನ್ನು ಶಾಸನಗಳಲ್ಲಿ ಸೂಳೆಯರು, ತೊತ್ತು, ಸೇವೆಯರು ಎಂದು ಉಲ್ಲೇಖಿಸಲಾಗಿದೆ. ವಿಪ್ರ ಶಾಸನವೊಂದರಲ್ಲಿ "ವೇಶ್ಯಾವಾಟ" ಎಂಬ ಶಬ್ದ ಉಲ್ಲೇಖವಾಗಿದೆ.[೬೦] ಮತ್ತೊಂದು ಕೆಸರಟ್ಟೆ ಶಾಸನವೊಂದರಲ್ಲಿ 'ಸೂಳೆಗೆ' ಎಂದು ಉಲ್ಲೇಖವಿದೆ.[೬೧] ಹೀಗೆ ಶಾಸನಗಳಲ್ಲಿ ವೇಶ್ಯಾವಾಟಿಕೆ ಬಗ್ಗೆ ಕಂಡುಬರುತ್ತದೆ.

**ಸಂಪ್ರದಾಯ ನಂಬಿಕೆಗಳು :**

ನಮ್ಮ ದೈನಂದಿನ ಬದುಕಿನಲ್ಲಿ ಅನೇಕ ಪದ್ಧತಿ ಆಚರಣೆ ನಂಬಿಕೆ, ಕಲ್ಪನೆಗಳಿಗೆ ಅವಕಾಶಗಳನ್ನು ಕೊಟ್ಟು ಇವುಗಳನ್ನು ಒಂದು ಸಂಪ್ರದಾಯವೆಂಬ ರೂಪಕೊಟ್ಟಿದ್ದೇವೆ. ಮಾನವನ ಅಂತರಂಗದ ಪ್ರತಿಕ್ರಿಯೆಗಳನ್ನು ನಂಬಿಕೆಗಳೆನ್ನಬಹುದು. ಇಂತಹ ನಂಬಿಕೆ ಮತ್ತು ಸಂಪ್ರದಾಯಗಳನ್ನು ಪ್ರಾಚೀನ ಕಾಲದಿಂದಲೂ ರೂಢಿಸಿಕೊಂಡು ಬಂದಿದ್ದಾನೆ. ಇವು ಆಯಾ ಧರ್ಮದ ಮೇಲೆ ಅವಲಂಬಿತವಾಗಿದೆ.

ಈ ಓಣ್ಣೆಲೆಯಲ್ಲಿ ಧಾನ್ಯ, ದಾನ, ವೃತ್ತಿ ಆಚರಣೆ ಹಬ್ಬ, ಆಚಾರ, ವಿಚಾರ ನಡವಳಿಕೆ, ಪೂಜೆ, ತೀರ್ಥಕ್ಷೇತ್ರ ಪುಣ್ಯ, ಪಾಪಗಳ ಕಲ್ಪನೆ ಬೆಳೆದುಬಂದಿದೆ.

ದಾನ ವ್ರತ :

ಶಾಸನಗಳ ಉಗಮ ದಾನಧರ್ಮಗಳಲ್ಲಿ ಎನ್ನುವಂತೆ ದಾನ ಬಿಡುವ ಪದ್ಧತಿಯು ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಒಂದು ಮೌಲ್ಯ ಅದು ವ್ಯಕ್ತಿಯ ಶ್ರೇಯಸ್ಸು ಮತ್ತು ಪುಣ್ಯಾರ್ಜನೆಗಿರುವ ಮುಖ್ಯ ಸಾಧನವಾಗಿತ್ತು. ದಾನಗಳು ಇವರಿಗೆ ಇಂತವರಿಗೆ ಎಂದು ಸೀಮಿತವಾಗಿರಲಿಲ್ಲ. ಯಾರಾದರೂ ದಾನ ಬಿಡಬಹುದು. ಆದರೆ ಶಾಸನಗಳಲ್ಲಿ ರಾಜರು ವಿವಿಧ ಅಧಿಕಾರಿಗಳು ಪುರೋಹಿತ ವರ್ಗದ ಬ್ರಾಹ್ಮಣರು ಮತ್ತು ಇತರರು ಈ ಕಾರಣಗಳಿಂದಾಗಿ ದಾನಬಿಟ್ಟ ಉಲ್ಲೇಖಗಳು ಈ ನಾಡಿನಾದ್ಯಂತ ದೊರೆಯುತ್ತದೆ. ಪ್ರಭುವರ್ಗದವರು ಹೆಚ್ಚಾಗಿ ಪುತ್ರೋತ್ಸವದ ಸಂದರ್ಭದಲ್ಲಿ ದೇವರ ಸಕಲ ಕಾರ್ಯಕಲಾಪಗಳಿಗೆ ಒಳ್ಳೆಯ ನಕ್ಷತ ಕಾಲದಲ್ಲಿ ದಾನಧರ್ಮಗಳನ್ನು ಕೈಗೊಳ್ಳುತ್ತಿದ್ದರು. ಮಧ್ಯವರ್ಗದವರು ಸಾಮಾನ್ಯವಾಗಿ ತಮ್ಮ ಹರಕೆಗೆ ತಕ್ಕಂತೆ ದಾನಗಳನ್ನು ಬಿಡುತ್ತಿದ್ದರು. ಶಾಸಗಳಲ್ಲಿ ದಾನ ಬಿಡುವ ಸಮಯವನ್ನು ಹಬ್ಬ, ಸೂರ್ಯಗ್ರಹಣ, ಚಂದ್ರಗ್ರಹಣ, ಸಂಕ್ರಾಂತಿಯ ದಿನಗಳು ಪ್ರಶಸ್ತವಾದವುಗಳು ಎಂಬ ನಂಬಿಕೆ ಇರುವುದನ್ನು ಉಲ್ಲೇಖಿಸುತ್ತದೆ. ದಾನ ಧರ್ಮಗಳನ್ನು ಸಾಮಾನ್ಯವಾಗಿ ದೇವಾಲಯಗಳ ಪರಿಸರದಲ್ಲಿ ನೀಡುತ್ತಿದ್ದರು.

ನದಿ ತೀರ್ಥಕ್ಷೇತ್ರ :

ಸಾಮಾನ್ಯವಾಗಿ ಪವಿತ್ರ ದಿನಗಳಲ್ಲಿ ವಿಶೇಷವಾದ ದಿನಗಳಲ್ಲಿ ಹಬ್ಬಗಳಲ್ಲಿ ನದಿಸ್ನಾನ ಮಾಡುವುದು, ಒಂದು ಸಂಪ್ರದಾಯ ನಂಬಿಕೆಯಾಗಿದೆ. ಗಂಗಾ ಮತ್ತು ತುಂಗ ನದಿಗಳು ಪವಿತ್ರವಾದವುಗಳೆಂದು ಭಾರತೀಯರ ನಂಬಿಕೆ ಆದ್ದರಿಂದ ನಮ್ಮವರು ನೀರಿನಲ್ಲಿ ಗಂಗೆ ಎಂದೇ ಕರೆದಿದ್ದಾರೆ. ಇಂಥ ಸ್ಥಳದಲ್ಲಿರುವ ದೇವಾಲಯಕ್ಕೆ ದತ್ತು ಬಿಡುವುದನ್ನು ಶ್ರೇಷ್ಠವೆಂದು ತಿಳಿದಿದ್ದರು. ಆನೆಗೊಂದಿ ಶಾಸನವೊಂದರಲ್ಲಿ "ತುಂಗಭದ್ರೆಯ ತೆಂಕಣ ತಡಿಯ ಪಂಪೆಯ ಬಿಡಿಸಲು ಸುಮಸ್ತ" ಎಂದು ಉಲ್ಲೇಖವಿದೆ.[23] ಅಂದರೆ ಚಾಲುಕ್ಯಾಭರಣ ಶ್ರೀಮದಾಹವಲ್ಲ ದೇವನು ತುಂಗಭದ್ರ ತಡಿಯ ಪಂಪೆಯ ಬಿಡಿನಲ್ಲಿದ್ದಂತೆ ದಾನ ಬಿಟ್ಟಿರುವ ವಿಷಯ ತಿಳಿಸುತ್ತದೆ. ಮತ್ತೊಂದು ವಿಪ್ರ ಶಾಸನವೊಂದರಲ್ಲಿ ಪುಣ್ಯತೀರ್ಥಂ ಎಂದು ಉಲ್ಲೇಖವಿದೆ. ಮತ್ತೊಂದು ಶಾಸನದಲ್ಲಿ ಸ್ನಾನ ದಿನ ಅಮೃತತೀರ್ಥ ಎಂದು ಉಲ್ಲೇಖವಿದೆ.[24]

ಆಹಾರ ಪದಾರ್ಥಗಳು :

ಆಹಾರವಿಲ್ಲದೆ ಒಂದು ಜೀವಿಯು ಸಹ ಬದುಕುವುದು ಕಠಿಣ. ಪ್ರಾಚೀನ ಕಾಲದಲ್ಲಿ ಆಹಾರ ಪದಾರ್ಥಗಳಿಗೆ ಕೆಲವೊಂದು ಹೆಸರುಗಳನ್ನು ಬಳಸಿರುವುದನ್ನು ಶಾಸನಗಳಲ್ಲಿ ಉಲ್ಲೇಖವಾಗಿದೆ. ಹಾಗೆಯೇ ಆಹಾರ, ವೈವಿಧ್ಯದ ವಿಷಯಗಳನ್ನು ಉಲ್ಲೇಖಿಸುವುದಿಲ್ಲ. ಪದಾರ್ಥಗಳಿಂದ ಎಲೆ, ಅಡಿಕೆ, ತೈಲಗಳನ್ನು ಉಪಯೋಗಿಸುತ್ತಿದ್ದರು. ಇವುಗಳನ್ನು ತಯಾರಿಸಲು ಅಂದರೆ ಆಹಾರವನ್ನು ತಯಾರಿಸಲು ಬಂಡಿಗಟ್ಟಲೆ ಸೌದೆಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. ಹಳೆ ಅಯೋಧ್ಯೆ ಶಾಸನವೊಂದರಲ್ಲಿ

ಚೆನ್ನಮಲ್ಲಿಕಾರ್ಜುನ ಒಡೆಯನಿಗೆ ನಿರಾಸಿ ಮಠಕ್ಕೆ ಮಾನ್ಯವಾಗಿ ಭೂಮಿಯನ್ನು ನೀಡಿ ಆ ಸ್ಥಳದಲ್ಲಿ ಬದನೆ, ಬಾಳೆ, ತೆಂಗು, ಹಲಸು ಮುಂತಾದವುಗಳನ್ನು ಬೆಳೆದುಕೊಂಡಿರಬೇಕೆಂದು ಉಲ್ಲೆಖವಿದೆ. ಅಂದರೆ ಆಹಾರ ಪದಾರ್ಥಗಳನ್ನು ದೇವರ ನೈವೇದ್ಯಕ್ಕೆ ಬ್ರಾಹ್ಮಣ ಭೋಜನಕ್ಕೆ ಉಪಯೋಗಿಸುತ್ತಿದ್ದರು. ಜೊತೆಗೆ ಇವುಗಳಿಗೆ ದಾನದತ್ತಿಗಳನ್ನು ಬಿಡುತ್ತಿದ್ದರು. ದೀಪಾವಳಿ ಹಿಂದುಗಳಿಗೆ ವಿಶೇಷವಾದ ಸಂತೋಷವನ್ನುಂಟು ಮಾಡುವುದಲ್ಲದೆ ಕಾರ್ತಿಕ ಮಾಸದಲ್ಲಿ ಬರುವ ಇದು ದಿವಾಳಿ ಎಣ್ಣೆಸ್ನಾನ ಮಾಡಿ ಸುಂದರವಾದ ಬಣ್ಣಬಣ್ಣದ ಹೊಸಬಟ್ಟೆಗಳನ್ನು ಹಾಕಿಕೊಂಡು ಅಡಿಕೆ ಸುಣ್ಣವನ್ನು ಸೇರಿಸಿ ವೀಳ್ಯೆದೆಲೆಯೊಂದಿಗೆ ಎಲೆ ಅಡಿಕೆಯನ್ನು ಪರಸ್ಪರ ಹಂಚುವುದನ್ನು ನೋಡಬಹುದು. ಹೀಗೆ ಪದಾರ್ಥಗಳನ್ನು ಆಯಾ ಹಬ್ಬದ ದಿನಗಳಲ್ಲಿ ಪೂಜೆ, ನೈವೇದ್ಯಗಳಲ್ಲಿ ಹೆಚ್ಚಾಗಿ ಬಳಸುತ್ತಿದ್ದರು. ಆನೆಗೊಂದಿ ಶಾಸನವೊಂದರಲ್ಲಿ "ಮೂಗಳ ಜೋಳದಕೆಯ್ಯನು ಗೊಳಗ ಸಹಿತವಾಗಿ" ಎಂದು ಉಲ್ಲೇಖವಿದೆ. ಅಂದರೆ ೩ಕೊಳಗ ಸಹಿತವಾಗಿ ಜೋಳವನ್ನು ದಾನ ನೀಡಿದ ವಿವರಣೆ ಇದೆ.

**ಸಾರ್ವಜನಿಕ ಚಟುವಟಿಕೆಗಳು :**

ಕನ್ನಡಿಗರ ಎಲ್ಲಾ ಚಟುವಟಿಕೆಗಳು ಮೂಲ ಪ್ರೇರಣೆ ಧರ್ಮವೇ ಆಗಿದೆ. ಲೌಕಿಕ ವ್ಯವಹಾರಗಳಿಂದಲೇ ತೃಪ್ತಿ ಪಡೆಯದ ಮಾನವ ಕಾರ್ಯಕ್ಕೆ ಕೈಹಾಕಿದರು. ಈ ಹಂತದಲ್ಲಿ ಅವರಿಗೆ ಸತ್ಕಾರ್ಯದ ಮೂಲಕ ಪುಣ್ಯಗಳಿಸಬೇಕೆಂಬ ಆಸೆ ಮೂಡಿತು. ಇದಕ್ಕೆ ಜಾತಿಮತ ಪಂಥಗಳಾವವು ಅಡ್ಡಿಬರಲಿಲ್ಲ. ಸೇವೆ ಮತ್ತು ತ್ಯಾಗ ವೃತ್ತಿಯಿಂದ ಸಮರ್ಪಣಭಾರವನ್ನು ಮೆರೆದಿದ್ದಾರೆ. ಇದನ್ನು ಅನೇಕ ದೇವಾಲಯಗಳ ಕೆರೆ, ಬಾವಿಗಳ, ಕಟ್ಟೆಗಳು, ಸತ್ರಗಳು ಅರವಟಿಕೆಗಳು ನಿರ್ಮಾಣಗೊಂಡವು. ಇವುಗಳ ಸುವ್ಯಸ್ಥೆಯ ಕಾರ್ಯವು ಮುಂದುವರೆಯಿತ್ತಾ ಬಂದಿತ್ತು. ಇಂತಹ ಕೆಲಸಗಳಲ್ಲಿ ನಮ್ಮ ಜನರು ಮೇಲು ಕೀಳನ್ನದೆ ಬಡವ ಬಲ್ಲವ ಎಲ್ಲರೂ ಸೇರಿ ಉದಾರಭಾವದಿಂದ ದಾನದತ್ತಿಗಳನ್ನು ನೀಡಿದರು. ಮಾನವ ಜೀವನದ ಅವಶ್ಯಕ ಮತ್ತು ಅಗತ್ಯವಾದ ನೈಸರ್ಗಿಕ ಸಂಪನ್ಮೂಲಗಳಾದ ಗಾಳಿ, ಅನ್ನ ನೀರು ಬೇರೆ ಬೇರೆ ವಸತಿ ಹೆಚ್ಚಿದಂತೆಲ್ಲ ಹೊಸ ಆಯಾಮಗಳನ್ನು ಸೃಷ್ಟಿ ಮಾಡಲು ಅದರಲ್ಲಿ ನೀರಿನ ಪೂರೈಕೆಗೆ ನಮ್ಮ ಪ್ರಾಚೀನರು ಹೆಚ್ಚಿನ ಆದ್ಯತೆಯನ್ನು ನೀಡಿದ್ದಾರೆ. ಕನ್ನಡಗಿರ ಔದಾರ್ಯ ಮುಖ್ಯವಾಗಿ ಒಂದು ದೇವಾಲಯದ ನಿರ್ಮಾಣದಲ್ಲಿ ಮತ್ತೊಂದು ತಟಾಕ (ಕೆರೆ) ನಿರ್ಮಾಣದಲ್ಲಿ ಎಂಬ ಮಾತು ಪ್ರಾಚೀನ ಕಾಲಕ್ಕೆ ನಿಜವೆ ಆಗಿತ್ತು. ಯಾವ ವ್ಯಕ್ತಿಯೇ ಆಗಲಿ ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯನು ನೀರನ್ನು ಕುಡಿದರೆ ಅವನಿಗೆ ಕೋಟಿ ಪುಣ್ಯ ಬರುತ್ತದೆ ಎಂಬ ನಂಬಿಕೆಯೂ ಶಾಸನಗಳಿಂದ ತಿಳಿದುಬರುತ್ತದೆ. ಶಾಸನಗಳಲ್ಲಿ ಕೆರೆಯ ಪ್ರಸ್ತಾಪವು ಬಂದಿದೆ. ಕೆಲವೊಂದು ವ್ಯಕ್ತಿಯ ಹೆಸರಿನಲ್ಲಿ ಬಂದರೆ ಕೆಲವೊಂದು ಕೆರೆಗೆ ದಾನ ನೀಡಿದ ಉಲ್ಲೇಖಗಳು ಬಂದಿವೆ. ಆದರೆ ಇಲ್ಲಿ ಕೆಲವಾರು ಕೆರೆಗಳ ಹೆಸರುಗಳು ವ್ಯಕ್ತವಾಗಿವೆ. ಕನಕಗಿರಿ ಶಾಸನವೊಂದರಲ್ಲಿ ಎನೆಯ ವುಡಸಿ ನಾಯಕನ ಹೆಂಡತಿ ಚಿಣ್ಣಮ್ಮ ಕನಕರಾಯ ಕೆರೆಯನ್ನು ಕಟ್ಟಿಸಿದ ವಿವರಣವಿದೆ. ಕನ್ನೆರುಮಡು ಶಾಸನವೊಂದರಲ್ಲಿ ಬೊಮಣನಾಯಕ ಮಗನಾದ ಲಖಿಮಣ ನಾಯಕ ಮತ್ತು ಬೊಮ್ಮನಾಗತಿ ಇವರಿಬ್ಬರು ಕೆರೆಯನ್ನು ಕಟ್ಟಿಸಿದರು ಎಂದು ಉಲ್ಲೇಖವಿದೆ. ಮತ್ತೊಂದು ಬಸ್ರಿಹಾಳ ಶಾಸನವೊಂದರಲ್ಲಿ ವುಡಸಿ ನಾಯಕನ ಹೆಂಡತಿ ಕನಕಮ್ಮ ಭಾವಿಯನ್ನು ಕಟ್ಟಿಸಿದಳು ಎಂದು ಉಲ್ಲೇಖವಿದೆ. ಮತ್ತು ಕೆಲವು ಶಾಸನಗಳಲ್ಲಿ ಅರವಟ್ಟಿಗೆ ನಿರ್ಮಿಸಿದ ಉದಾಹರಣೆಗಳು ಕಂಡುಬರುತ್ತದೆ.

ಆನೆಗೊಂದಿ ಶಾಸನವೊಂದರಲ್ಲಿ ಬಸವರಾಜ ದೇವರಿಗೆ ದಿನನಿತ್ಯ ನೈವೇದ್ಯ ಸಲುವಾಗಿ ಅರವಟ್ಟಿಗೆ ನಿರ್ಮಿಸಿದ ಉಲ್ಲೇಖವಿದೆ.[೩೯] ಮತ್ತೊಂದು ಅದೇ ಊರಿನ ಶಾಸನವೊಂದರಲ್ಲಿ ತಿರುಮಲರಾಜನ ಆಳ್ವಿಕೆ ಕಾಲದಲ್ಲಿ ಜಂಗಮಯ್ಯ ಮಠಕ್ಕೆ ೨೦೦ ಹೊನ್ನಗಳಿಗೆ ಹೊಲ ಮತ್ತು ಅರವಟ್ಟಿಗೆ ನೀಡಿದ ಉಲ್ಲೇಖವಿದೆ.[೪೦] ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ 'ಸೂಳೆಯಕೆರೆ' ಎಂದು ಉಲ್ಲೇಖವಿದೆ.[೪೧] ಆದರೆ ಇದು ಕೆರೆಯ ಹೆಸರೋ? ಅಥವಾ ಸ್ಥಳದ ಹೆಸರೋ? ಗೊತ್ತಾಗುವುದಿಲ್ಲ ಆದರೆ ಪ್ರದೇಶ ಎಂದಾಗಿರಬೇಕು. ಆದ್ದರಿಂದ 'ಸೂಳೆಯಕೆರೆ' ಇದು ಒಂದು ಗ್ರಾಮವೆಂದು ಹೇಳಬಹುದು. ಇಂತಹ ಕೆರೆ ಅರವಟ್ಟಿಗೆಗಳು ಸಾರ್ವಜನಿಕರಿಗೆ ಉಪಯೋಗವಾಗಿದ್ದವು. ಬೇಸಿಗೆಯ ಕಾಲದಲ್ಲಿ ಪ್ರಯಾಣಿಕರಿಗೆ ಬಾಯಾರಿಕೆಗಾಕಿ ಮಾರ್ಗಮದ್ಯದಲ್ಲಿ ಅರವಟ್ಟಿಗೆ ನಿರ್ಮಿಸುತ್ತಿದ್ದರು. ಇವು ಸ್ವಂತ ದೇವಸ್ಥಾನಗಳಿಗೆ ಹೊಂದಿಕೊಂಡಿರುತ್ತಿದ್ದವು. ಅರವಟ್ಟಿಗೆಗಳಲ್ಲಿ ನೀರು, ಸತ್ರಗಳಲ್ಲಿ ಅನ್ನಸಿಗುತ್ತಿತ್ತು. ಇಂತಹ ಉಲ್ಲೇಖಗಳು ಇಲ್ಲಿಯ ಬಹುಪಾಲು ಶಾಸನಗಳಲ್ಲಿ ಕಂಡುಬರುತ್ತವೆ. ಸತ್ರ(ಛತ್ರ)ಗಳಿಗೆ ದೇವಸ್ಥಾನ ಮತ್ತು ಮಠಗಳಿಗೆ ಹೊಂದಿಕೊಂಡಿದ್ದು ದೇವಸ್ಥಾನಗಳ ಅಂಗಗಳಾಗಿದ್ದು ಅತಿಥಿ ಸತ್ಕಾರದ ವಿಸ್ತೃತರೂಪ ಸತ್ರವೆನ್ನಬಹುದಾಗಿದೆ. ದಾನಗಳಲ್ಲಿ ಅನ್ನದಾನ ಶ್ರೇಷ್ಟವೆಂದು ನಂಬಿದ್ದರು. ಭೂದಾನ ವಿದ್ಯ ದಾನಗಳಿಗಿಂತ ದಾನವೆ ಮೇಲು ಎಂದು ಈಗಲೂ ಸಹ ನಂಬಿದ್ದಾರೆ. ಹಸಿದವರಿಗೆ ಅನ್ನ ಹಾಕಬೇಕೆಂದು ಮಾತಿನ ಅರ್ಥದಂತೆ ಅಂದಿನ ಕಾಲಕ್ಕೆ ಸತ್ರಗಳು ನಿರ್ಮಾಣವಾಗಿದ್ದವು.

ಶಿಕ್ಷಣ :

ಒಂದು ನಾಡು ಸುಸಂಸ್ಕೃತವಾಗಿದೆ ಎಂಬುದನ್ನು ಅಲ್ಲಿಯ ವಿದ್ಯಾಕೇಂದ್ರಗಳಿಂದ ತಿಳಿಯಬಹುದು. ನಾಡಿನಾದ್ಯಂತ ದೊರಕುವ ನೂರಾರು ಶಾಸನಗಳು ಆ ಕಾಲದ ವಿದ್ಯಾಭ್ಯಾಸದ ಪದ್ಧತಿಯ ಪರಿಚಯವನ್ನು ಕೊಡುತ್ತವೆ. ಉದಾರ ಮತ್ತು ಹೆಚ್ಚಿನ ಪ್ರೋತ್ಸಾಹ ಇದಕ್ಕೆ ನಿದರ್ಶನಗಳಾಗಿವೆ. ಪ್ರಾಚೀನ ಕಾಲದಿಂದಲೂ ವಿದ್ಯೆಗೆ ಗೌರವ ನೀಡುತ್ತಾ ಬಂದಿದ್ದಾರೆ. ಅವರು ಲೌಕಿಕ ಜ್ಞಾನಕ್ಕಿಂತ ಆಧ್ಯಾತ್ಮಿಕ ಜ್ಞಾನವೇ ಹೆಚ್ಚು ಎಂದು ಅರಿತು ವಿದ್ಯೆಗೆ ಹೆಚ್ಚಿನ ಒತ್ತನ್ನು ನೀಡಿದ್ದರು. ಆದ್ದರಿಂದ ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದಲ್ಲಿ ಕಂಡುಬರುವ ಅಂಶಗಳೆಂದು ಊರೂರುಗಳಲ್ಲಿ ದೇವಾಲಯಗಳಲ್ಲಿ, ಮಠಗಳಲ್ಲಿ, ಅಗ್ರಾಹಾರಗಳಲ್ಲಿ ಘಟಿಕಸ್ಥಾನಗಳಲ್ಲಿ ವಿದ್ಯೆ ಕಲಿಸಲಾಗುತ್ತಿತ್ತು. ದೇವಾಲಯಗಳಿಗೆ ದಾನದತ್ತಿಗಳನ್ನು ಬಿಡುವಾಗ ವಿದ್ಯಾಭ್ಯಾಸಕ್ಕೆ ಇಂತಿಷ್ಟು ಭಾಗವನ್ನು ಮೀಸಲಾಗಿರಿಸುತ್ತಿದ್ದರು. ವಿದ್ಯೆ ಕೇಂದ್ರಗಳಾದ ದೇವಸ್ಥಾನಗಳಲ್ಲಿ ಮಠಗಳಲ್ಲಿ ತಪೋಧನರು ಛಾತ್ರರು ವಿದ್ಯಾಭ್ಯಾಸಗಳಲ್ಲಿ ನಿರತರಾಗಿದ್ದರು. ತಪೋಧನರು ನೈವೇದ್ಯ ಬ್ರಹ್ಮಪುರಿಗಳಾಗಿದ್ದು ವಿದ್ಯಾಭ್ಯಾಸದ ನಂತರ ಮಠ ದೇವಸ್ಥಾನಗಳ ಸ್ಥಾನಪತಿಗಳಾಗಿದ್ದರು. ವಿದ್ಯಾಭ್ಯಾಸದ ನಂತರ ಮಠ ದೇವಸ್ಥಾನಗಳ ಸ್ಥಾನಪತಿಗಳಾಗುತ್ತಿದ್ದರು. ಛಾತ್ರರು ಗೃಹಸ್ಥ, ಶ್ರಮಕ್ಕೆ ಮರಳುತ್ತಿದ್ದರು. ಋಗ್ವೇದದಲ್ಲಿ ವಿದ್ಯೆಗೆ ಹೆಚ್ಚಿನ ಮಹತ್ವ ಕೊಟ್ಟಿದೆ ಎಂದು ತಿಳಿದುಬರುತ್ತದೆ. ದೇವಸ್ಥಾನದ ಮಠಗಳ ಸಮಸ್ತ ಹೊಣೆ ಹೊತ್ರಸ್ಥಾನಚಾರದ ನೈವೇದ್ಯ ಬ್ರಹ್ಮಚಾರಿಗಳಾಗಿರುವುದರೊಂದಿಗೆ ವಿದ್ಯಾಪಕ್ಷಿಪಾತಿಗಳೂ ಆಗಿದ್ದರು. ಕೆಲವು ಶಾಸನಗಳಲ್ಲಿ ವಿಪ್ರ ಶಾಸನವೊಂದರಲ್ಲಿ ಕ್ರಿ.ಶ. "ತಪೋಧರನರಿಗಂ" ದಾನಂಗೆಯ್ಯನಿದನ ಎಂದು ಉಲ್ಲೇಖಿಸಿದೆ.[೪೨] ಕೆಲವು ಶಾಸನಗಳಲ್ಲಿ ತಪೋನರಿಗೆ ನೈವೇದ್ಯರಿಗೆ ವಿದ್ಯಾರ್ಥಿಗಳಿಗೆ ಮಠಗಳಿಗೆ ದಾನದತ್ತಿಗಳನ್ನು ನೀಡಿದ ಉಲ್ಲೇಖಗಳನ್ನು ಕಾಣಬಹುದು. ಆನೆಗೊಂದಿ ಶಾಸನವೊಂದರಲ್ಲಿ ತಿರುಮಲರಾಜನು ಆಳ್ವಿಕೆಯಲ್ಲಿ

ಜಂಗಮಯ್ಯ ಮಠಕ್ಕೆ ೨೦೦ ಹೊನ್ನಗಳಿಗೆ ಹೊಲ ಅರವಟ್ಟಿಗೆ ನೀಡಿದ ಉಲ್ಲೇಖವಿದೆ. ಅಯೋಧ್ಯ ಶಾಸನವೊಂದರ ಚೆಂತಗಲ ಮಾಗಣೆಯ ಅಪಣನು ಚೆನ್ನ ಮಲ್ಲಿಕಾರ್ಜುನ ಒಡೆಯನಿಗೆ ನಿರಾಸಿಮಠ ಮಾನ್ಯವಾಗಿ ಭೂಮಿಯನ್ನು ನೀಡಿದ ಎಂದು ಉಲ್ಲೇಖವಿದೆ.

**ವಿದ್ಯಾಭ್ಯಾಸ ಕ್ರಮ :**

ದೇವಸ್ಥಾನಗಳಲ್ಲಿ ಮಠಗಳಲ್ಲಿ ಅಗ್ರಹಾರಗಳಲ್ಲಿ ಘಟಿಕಾಸ್ಥಾನಗಳಲ್ಲಿ ಬ್ರಹ್ಮಪುರಿಗಳಲ್ಲಿ ವಿದ್ಯಾಭ್ಯಾಸವನ್ನು ಕಲಿಸುತ್ತಿದ್ದರು.

**೧. ಅಗ್ರಹಾರ :**

ಮಠಗಳು 'ಅಗ್ರಹಾರ' ಎಂಬ ಪದದಲ್ಲಿ ಎರಡು ಅರ್ಥಗಳು ಅಡಗಿವೆ. ಅಗ್ರಹಾರ ಅಗ್ರ (ಶ್ರೇಷ್ಠ ಉನ್ನತ) ಎಂದಾದರೆ ಆಹಾರ ಎಂದರೆ (ಸ್ಥಳ) ಪದಾರ್ಥ ಎಂದು ಗುರುತಿಸುವುದಾದರೆ ಅದು ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ, ಊರು ಮತ್ತು ವಸ್ತು ಪದಾರ್ಥವೆಂದು ಪರಿಗಣಿಸಬಹುದು. ಅಂದರೆ ಇಲ್ಲಿ ಶ್ರೀ ಧರೆಂದರೆ ಚತುರ್‌ವರ್ಣದಲ್ಲಿ ಅಗ್ರಹಾರ ಬ್ರಾಹ್ಮಣರೆನ್ನಲಾಗಿದೆ. ಆದ್ದರಿಂದ ಅವರಿಗೆ ದತ್ತಿಯಾಗಿ ಬಿಟ್ಟುಕೊಟ್ಟ ಊರುಗಳೇ ಅಗ್ರಹಾರಗಳು ಈ ದತ್ತಿಗಳನ್ನು ಸಾಮಾನ್ಯವಾಗಿ ಬ್ರಾಹ್ಮಣರಿಗೆ ಬಿಟ್ಟು ಕೊಡಲಾಗುತ್ತಿದ್ದರು. ಈ ಅಗ್ರಹಾರಗಳಲ್ಲಿ (ಐವತ್ತು) ೫೦ ಮಹಾರಾಜರು ಇದ್ದರೆಂದು ತಿಳಿಯುತ್ತದೆ.

**ಮಹಾಜನರು :**

ಕರ್ನಾಟಕದ ಶಾಸನಗಳಲ್ಲಿ ಉದ್ದಕ್ಕು ದಾಖಲಾಗುತ್ತ ಬಂದವುಗಳಲ್ಲಿ ವೈದಿಕ ಧರ್ಮ ಒಂದು ಮಹಾಜನ ಸಂಸ್ಥೆಯನ್ನು ರೂಪಿಸಿಕೊಂಡು ಪ್ರಭಾವ ಬೀರುತ್ತಾ ಬಂದಿದೆ. ಈ ಜಿಲ್ಲೆಯಲ್ಲಿ ಮಹಾಜನರಿಗೆ ಸಂಬಂಧಿಸಿದಂತೆ ಕಡಿಮೆ ಶಾಸನಗಳು ದೊರೆತಿದ್ದರೂ ಮುಧುವೊಳಲು, ಬಳಂಗೆರೆ, ಕುಕ್ಕನೂರು ಇಟ್ಟಿಗಿ, ಅಳವಂಡಿ, ತಳಕಲ್ಲು ಮುಂತಾದ ಗ್ರಾಮಗಳು ಅಗ್ರಾಹಾರಗಳಾಗಿದ್ದವು. ಅಲ್ಲಿದ್ದ ಮಹಾಜನರ ಬಗ್ಗೆ ಶಾಸನಗಳಲ್ಲಿ ಒಂದೇ ತೆರನಿದೆ. ಮಹಾಜನರ ಸಂಖ್ಯೆ ಕೆಲವು ಗ್ರಾಮಗಳಲ್ಲಿ ಒಂದೇ ಆಗಿದೆ. ಮಹಾಜನರೆಂದರೆ ಬ್ರಾಹ್ಮಣರೇ ಆಗಿರುತ್ತಾರೆ. ಈ ಕೆಳಗಿನ ಅಗ್ರಹಾರಗಳಲ್ಲಿಯ ಮಹಾಜನರ ಸಂಖ್ಯೆ ಹೀಗಿವೆ. ಅಳವಂಡಿ - ೪೦೦, ಇಟ್ಟಿಗೆ ೪೦೦, ಕುಕ್ಕನೂರು - ೧೦೦೦, ಕೌಲೂರು - ೫೦೦ ಬಳಿಗೇರಿ - ೩೦೦, ಮಾದಿನೂರು - ೩೦, ಮುಧುವೊಳಲು - ೧೦೦೦ ಹಲಗೇರಿ - ೨೦೦, ಹುಲಿಗಿ - ೫೩, ಕೊಪ್ಪಳ - ೧೨೦ ಹೀಗೆ ಬೇರೆ ಬೇರೆ ಅಗ್ರಹಾರಗಳಲ್ಲಿ ಬೇರೆ ಬೇರೆ ಸಂಖ್ಯೆಯ ಮಹಾಜನರಿರುತ್ತಿದ್ದರು. ಮಹಾಜನರಿದ್ದ ಊರಿನಲ್ಲಿ ಅಥವಾ ಆಸುಪಾಸಿನ ಊರುಗಳಲ್ಲಿನ ದೇವಾಲಯಕ್ಕೆ ಅಥವಾ ಬ್ರಾಹ್ಮಣರಿಗೆ ದಾನ ನೀಡಬೇಕೆಂದರೆ. ಈ ಮಹಾರಾಜರ ಒಪ್ಪಿಗೆ ಬೇಕಾಗಿತ್ತು. ಇವರ ಕಾಲನ್ನು ತೊಳೆದು ದಾನವನ್ನು ಬಿಡುತ್ತಿದ್ದರು. ವಿಪ್ರ ಶಾಸನವೊಂದರಲ್ಲಿ ಧರ್ಮಮಂ ಸ್ಪರ್ಧದಿಂ ಕಲಿಸಿದವರಿಗೆ ಬಾರಣವಾಸಿಯಲು ಸಾಸಿರ ಕವಿತೆಯಂ ಬ್ರಾಹ್ಮಣರಿಗಂ ತಪೋಧಪರನರಿಗಂ ದಾನಂಗೆಯ್ದು ನಿದನ ಆಡಳಿತ ಎಂದು ಉಲ್ಲೇಖವಿದೆ.[೮೫] ಅಂದರೆ ಈ ಧರ್ಮವನ್ನು ಸ್ವಧರ್ಮವೆಂದು ಕಲ್ಪಿಸಿದವರಿಗೆ ಸಾವಿರ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದ ಪುಣ್ಯವು ಲಭಿಸುವುದು ಎಂದು ತಿಳಿದುಬರುತ್ತದೆ. ಹಿರೆಬೆಂತಕಲ್ ಶಾಸನವೊಂದರಲ್ಲಿ ಈ ದೇವರಾಯ ಮತ್ತು ಬ್ರಹ್ಮರಾಯ ರೂಪದ ಈ ಧರ್ಮಕ್ಕೆ ಯಾರಾದರೂ

ತೊಡಕನ್ನುಂಟು ಮಾಡಿದರೆ ಬ್ರಹ್ಮ ಹತ್ಯಾ (ಬ್ರಾಹ್ಮಣರನ್ನು ಕೊಲ್ಲುವುದು) ಗೋವಧೆ ಸುವರ್ಣಸ್ತೇಯ (ಬಂಗಾರವನ್ನು ಕದಿಯುವುದು) ಸುರಾಪಾನ ಗುರುಪತ್ನಿ ಗಮನ ಈ ರೀತಿಯಾಗಿ ಐದು ಮಾಹಾಪಾತಕ ಮಾಡಿದ ಪಾಪಕ್ಕೆ ಒಳಗಾಗುವರು ಎಂದು ಉಲ್ಲೇಖವಿದೆ. ಆನೆಗೊಂದಿ ಶಾಸನವೊಂದರಲ್ಲಿ ಸದಾಶಿವರಾಯನು ಆನೆಗೊಂದಿಯ ಅಂಬಿಗರ ನಾಗಚೋಗಿ ಮತ್ತು ಬಸವ ಚೋಗಿಗೆ ಆನೆಗೊಂದಿಯಲ್ಲಿ ೧೫ ಕೊಳಗ ನೀರು ಭೂಮಿಯನ್ನು ನೀಡಿ ಇದರ ಆದಾಯವನ್ನು ಇವರು ಅನುಭವಿಸುತ್ತಾ ಬ್ರಾಹ್ಮಣ ಸಾಧು, ಸಂತರ ಸೇವೆ ಮಾಡಿಕೊಂಡಿರಬೇಕೆಂದು ಉಲ್ಲೇಖಿಸಿದೆ. ಹೀಗೆ ಮಹಾಜನರು ಬ್ರಾಹ್ಮಣರು ದಾನದತ್ತಿಗಳನ್ನು ಬಿಟ್ಟಿ ವಿಷಯ ತಿಳಿದುಬರುತ್ತದೆ. ಮಹಾಜನರು ಯಾಗವನ್ನು ಮಾಡುವುದು, ಮಾಡಿಸುವುದು, ಓದುವುದು, ಓದಿಸುವುದು ದಾನ ಸ್ವೀಕರಿಸುವುದು ಇವರ ಕೆಲಸಗಳಾಗಿದ್ದವು. ಇವುಗಳ ಜೊತೆಗೆ ಬೇರೆ ಬೇರೆ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರೆಂದು ತಿಳಿಸುತ್ತಾರೆ. ದೇವಾಲಯಗಳಿಗೆ ನೀಡಿದ ದಾನವು ಸರಿಯಾಗಿ ನಿರ್ವಹಣೆಯಾಗುವಂತೆ ನೋಡಿಕೊಳ್ಳುವುದು. ಮಹಾಜನರು ಪಾಂಡಿತ್ಯ, ಶಾಸ್ತ್ರ, ಪರಿಜ್ಞಾನಗಳು ವಿದ್ಯಾಕ್ಷೇತ್ರಗಳಲ್ಲಿ ಅವರಿಗೆ ಅಪಾರವಾದ ಗೌರವನ್ನು ತಂದು ಕೊಟ್ಟಿದ್ದಾರೆ. ಆ ಮೂಲಕ ಅವರು ಎಲ್ಲಾ ಕ್ಷೇತ್ರಗಳಲ್ಲಿಯು ಅಗ್ರಮಾನ್ಯರಾಗಿದ್ದರು. ಅದಕ್ಕಾಗಿ ಇವರಿಗೆ ಅನೇಕ ದಾನದತ್ತಿಗಳನ್ನು ನೀಡಿದರು. ಅಗ್ರಹಾರಗಳಂತು ಅವರಿಗಾಗಿಯೇ ನಿರ್ಮಾಣಗೊಂಡಿದ್ದವು ಇವರು ಅಗ್ರಹಾರಗಳಲ್ಲಿ ವಾಸಿಸಿದ್ದಂತೆಯೇ ನಿರ್ಮಾಣಗೊಂಡಿದ್ದವು. ಇವರು ಅಗ್ರಹಾರಗಳಲ್ಲಿ ವಾಸಿಸುತ್ತಿದ್ದಂತೆಯೇ ಇತರ ಧರ್ಮಗಳಲ್ಲಿ ಗೌರವವನ್ನು ತೋರುತ್ತಿದ್ದರು. ದೇವಸ್ಥಾಗಳಿಗೆ ದತ್ತಿಯನ್ನು ನೀಡಿದ್ದರು. ಇತರರು ಬಿಟ್ಟುದತ್ತಿಗಳನ್ನು ರಕ್ಷಿಸುತ್ತಿದ್ದರು.

ಹೀಗೆ ಅಗ್ರಹಾರಗಳ ಎಲ್ಲಾ ಚಟುವಟಿಕೆಗಳು ಸಾಮಾನ್ಯವಾಗಿ ಮಹಾಜನರ ಸಮ್ಮುಖದಲ್ಲಿ ನಡೆಯುತ್ತಿದ್ದವು. ಇವರು ಅಗ್ರಹಾರ ಒಡೆಯನಾಗಿ ಯಾವುದೇ ಕುಂದುಕೊರತೆಗಳು ಬಾರದಂತೆ ದಾನಧರ್ಮಗಳನ್ನು ನೀಡುವಲ್ಲಿ ಎಚ್ಚರಿಕೆ ವಹಿಸುತ್ತಿದ್ದರು. ಊರಿನ ಯಾವ ವ್ಯಕ್ತಿಯಾಗಲಿ ಇತರ ದಾನಧರ್ಮಗಳನ್ನು ಬಿಡಬೇಕಾದಾಗ ಈ ಮಹಾಜನರ ಅನುಮತಿಯನ್ನು ಪಡೆಯಬೇಕಾಗಿತ್ತು. ದಾನ ಸ್ವೀಕರಿಸುವಾಗ ಅದರ ಬಳಕೆಯೊಂದಿಗೆ ಅವುಗಳ ಪ್ರತಿಪಾಲನೆಯೂ ಮಹಾಜನರ ಮುಖ್ಯಕರ್ತವ್ಯವಾಗಿತ್ತು. ಆದ್ದರಿಂದ ಇಲ್ಲಿನ ಬಹುಪಾಲು ಶಾಸನಗಳಲ್ಲಿ ಮಹಾಜನರು ಕಂಡುಬರುತ್ತಾರೆ.

**ಬ್ರಹ್ಮಪುರಿ :**

ಮಹಾಜನರು ಪಂಡಿತರು ಇವರು ಕೆಲವು ಸಮಯದಲ್ಲಿ ಅಗ್ರಹಾರಗಳಲ್ಲಿ ಇರುತ್ತಿರಲಿಲ್ಲ. ಗ್ರಾಮಗಳಲ್ಲಿ ಒಂದು ಕಡೆಗೆ ಮನೆಯನ್ನು ಮಾಡಿಕೊಂಡು ವಾಸಿಸುತ್ತಿದ್ದರೆಂದು ತಿಳಿದುಬರುತ್ತದೆ. ಇವರು ವಾಸವಾಗಿರುವ ಕೇರಿಗಳನ್ನು ಬ್ರಹ್ಮಪುರಿ ಎಂದು ಕರೆಯುತ್ತಿದ್ದರು. ಬ್ರಹ್ಮಪುರಿ ಉಚ್ಚ ಶಿಕ್ಷಣ ಕೇಂದ್ರವಾಗುತ್ತಾ ಪೂರ್ಣವಾಗಿ ಒಂದು ಹಳ್ಳಿಯಾಗಿರುತ್ತಿತ್ತು. ಪಟ್ಟಣ ಮತ್ತು ನಗರದ ಒಂದು ಭಾಗವಾಗಿರುತ್ತಿತ್ತು. ಬ್ರಹ್ಮಪುರಿ ಉಪಾಧ್ಯಾಯರುಗಳು ಘನ ವಿದ್ವಾಂಸರುಗಳು ಆಗಿದ್ದರು. ಅನೇಕ ದೊರೆಗಳು ಬ್ರಹ್ಮಪುರಿಗಳನ್ನು ಸ್ಥಾಪಿಸಿದ್ದರೆಂದು ತಿಳಿದುಬರುತ್ತಾರೆ. ಸೂಡಿ, ವಿಕ್ರಮಪುರ, ಬಳ್ಳಿಗಾಂವೆ, ಅಣ್ಣಿಗೇರಿ, ತಲಕಾಡು ಮುಂತಾದ ಕಡೆಗಳಲ್ಲಿ ಬ್ರಹ್ಮಪುರಿ ಕೇಂದ್ರಗಳಾಗಿದ್ದವು.

**ಘಟಿಕಾಸ್ಥಾನ :**

ಘಟಿಕಾಸ್ಥಾನದ ಶಿಕ್ಷಣವು ಎಲ್ಲಕ್ಕಿಂತ ಮೇಲಿನದಾಗಿತ್ತು. ದಕ್ಷಿಣ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಕಂಚಿಯ ಪ್ರಮುಖ ಘಟಿಕಾಸ್ಥಾನವಾಗಿತ್ತು. ಕದಂಬ ಮಯೂರಶರ್ಮನು ವಿದ್ಯಾಭ್ಯಾಸಕ್ಕಾಗಿ ಕಂಚಿಯು ಘಟಿಕಾಸ್ಥಾನಕ್ಕೆ ಹೋಗಿದ್ದನು. ಕಾಲಕ್ರಮೇಣ ಕರ್ನಾಟಕದಲ್ಲಿ ಕೂಡ ಘಟಿಕಾಸ್ಥಾನಗಳು ಪ್ರಾರಂಭವಾದವು. ಘಟಿಕಾಸ್ಥಾನಗಳಲ್ಲಿ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ವಿದ್ಯೆಕಲಿಯುವುದರ ಜೊತೆಗೆ ಚರ್ಚೆ ಪ್ರತಿವಾದಗಳನ್ನು ನಡೆಸುತ್ತಿದ್ದರು. ಇದು ಕೂಡ ಕಲಿಕೆಯ ಒಂದು ಭಾಗವಾಗಿತ್ತು. ಗುಲ್ಬರ್ಗಾ ಜಿಲ್ಲೆಯ ನಾಗಾಯಿ, ಹೆಂಚೇರಿನ ನೊಳಂಬೇಶ್ವರ ದೇವಾಲಯ ಧಾರವಾಡ ಜಿಲ್ಲೆಯ ಹುಟ್ಬೂರು ಸಿಂಧನೂರು ತಾಲೂಕಿನ ಕಡಲೆವಾಡದ ಸ್ವಯಂಭೂ ದೇವಾಲಯ, ಕುಕನೂರು, ಪುಲಗೇರಿ, ಹೆಂಚೇರಿ ಇವು ಕೇಂದ್ರಸ್ಥಾನಗಳಾಗಿದ್ದವು.

**ವಿದ್ಯಾಭ್ಯಾಸ ಕ್ರಮ :**

ವಿದ್ಯಾಭ್ಯಾಸದ ಕ್ರಮದ ಬಗ್ಗೆ ಗಂಗಾವತಿ ತಾಲೂಕಿನ ಶಾಸನಗಳಲ್ಲಿ ಕಂಡುಬರುತ್ತದೆ. ದೇವಸ್ಥಾನ ಮತ್ತು ಮಠಗಳಲ್ಲಿ ಅಗ್ರಹಾರಗಳಲ್ಲಿ ಕಲಿಸುತ್ತಿದ್ದ ಪಠ್ಯಕ್ರಮದ ಬಗ್ಗೆ ಯಾವ ಮಾಹಿತಿಗಳು ಕಂಡುಬರುವುದಿಲ್ಲ. ಕನಕಗಿರಿ ಶಾಸನದಲ್ಲಿ ಆದರೆ ಪ್ರಾಥಮಿಕ ಹಂತದಿಂದ ಪ್ರೌಢ ಹಂತದವರೆಗೂ ವಿದ್ಯಾಭ್ಯಾಸ ನಡೆಯುತ್ತಿಬಹುದು. ಇಲ್ಲಿ ಕಲಿಸುತ್ತಿದ್ದ ವಿದ್ಯೆ ವೇದ, ಶಾಸ್ತ್ರ, ಪುರಾಣಗಳೆಂದು ಊಹಿಸಬಹುದು. ಆನೆಗೊಂದಿ ಶಾಸನದಲ್ಲಿ ವೇದ ಎಂಬ ಉಲ್ಲೇಖ ಕಂಡುಬರುತ್ತದೆ. ಆದರೆ ಪ್ರಾಥಮಿಕ ಹಂತದಿಂದ ಪ್ರೌಢಹಂತದವರೆಗೂ ವಿದ್ಯಾಭ್ಯಾಸ ನಡೆಸುತ್ತಿರಬಹುದು. ಇಲ್ಲಿ ಕಲಿಯುವ ವಿದ್ಯೆ ವೇದ, ಪುರಾಣ, ಶಾಸ್ತ್ರಗಳೆಂದು ಉಲ್ಲೇಖಿಸುತ್ತದೆ. ಆನೆಗೊಂದಿ ಶಾಸನವೊಂದರಲ್ಲಿ 'ವೇದ' ಎಂದು ಉಲ್ಲೇಖ ಕಂಡುಬರುತ್ತದೆ.[೪೬] ಮತ್ತೊಂದು ಕನಕಗಿರಿ ಶಾಸನವೊಂದರಲ್ಲಿ ವೇದಾಂತ, ವೇದ್ಯ, ಪುರಾಣ ಎಂದು ಉಲ್ಲೇಖವಿದೆ.[೪೭] ಇದರಿಂದ ಶಾಸ್ತ್ರಗಳನ್ನು ಪುರಾಣಗಳನ್ನು ವ್ಯತ್ಯಾಸ ಮಾಡಲಾಗುತ್ತಿತ್ತು ಮತ್ತು ಭೋದಿಸಲಾಗುತ್ತಿತ್ತು. ಒಂದೊಂದು ವಿಷಯವನ್ನು ಒಬ್ಬೊಬ್ಬ ಪಂಡಿತರು ಉಪಾಧ್ಯಾಯರು ಕಲಿಸುತ್ತಿದ್ದರು. ಮಹಾಜನರೆಂದು ಕರೆಸಿಕೊಂಡಿದ್ದ ಬ್ರಾಹ್ಮಣ ಸಹ ವೇದಶಾಸ್ತ್ರಗಳಲ್ಲಿ ಪಾರಾಂಗತರಾಗಿದ್ದರೆಂದು ತಿಳಿದುಬರುತ್ತದೆ. ಇವರು ಸಮಸ್ತ ಶಾಸ್ತ್ರ ವೇದ ಅಭ್ಯಾಸ ಬಲ್ಲವರಾಗಿದ್ದರು. ಶಾಸನಗಳಲ್ಲಿ ಉಪಾಧ್ಯಯರಿಗೆ ಮತ್ತು ಪುರಾಣ ಹೇಳುವರಿಗೆ ತನ್ನ ಮನೆಯನ್ನು ಪರೋಕ್ಷ ಮತ್ತು ಪ್ರತ್ಯಕ್ಷವಾಗಿ ದೇವರ ಮನೆಯನ್ನು ಬಿಟ್ಟು ಕೊಡುತ್ತಿದ್ದರೆಂದು ತಿಳಿದುಬರುತ್ತದೆ. ಹೀಗೆ ಶಾಸನಗಳಲ್ಲಿ ವಿದ್ಯಾಭ್ಯಾಸದ ಕ್ರಮದೊಂದಿಗೆ ವಿದ್ಯಾಗುರುಗಳು ವೇದಧ್ಯಾಯನವನ್ನು ಮಾಡುತ್ತಿದ್ದರೆಂದು ಇಲ್ಲಿನ ಬಹುಪಾಲು ಶಾಸನಗಳಿಂದ ತಿಳಿದುಬರುತ್ತದೆ.

**ಪಾಪ ಪುಣ್ಯ ಶಾಪಶಯಗಳು :**

ಸಮಾಜದಲ್ಲಿ ಶಾಸನಗಳನ್ನು ಕಾಪಾಡಿಕೊಳ್ಳಬೇಕೆಂಬ ಉದ್ದೇಶಕ್ಕಾಗಿ ಪಾಪ, ಪುಣ್ಯಸ್ವರ್ಗ ನರಕಗಳ ಕಲ್ಪನೆ ಹುಟ್ಟಿಕೊಂಡು ಮುಂದೆ ಅದೊಂದು ನಂಬಿಕೆಯಾಗಿ ಬಹಳ ಹಿಂದಿನಿಂದಲೂ ಬೆಳೆದುಬಂದಿದೆ. ಪ್ರಾಚೀನ ಕಾಲದಲ್ಲಿ ತಂದೆ ತಾಯಿಗಳು ಮಾಡಿದ ಪಾಪ ಪುಣ್ಯಗಳು ಮಕ್ಕಳಿಗೆ ತಟ್ಟುತ್ತದೆಂದು

ನಂಬಲಾಗಿದೆ. ಆದರೆ ಶರಣರು ಇದನ್ನು ಒಪ್ಪಿಕೊಳ್ಳುವುದಿಲ್ಲ. ಮಾಡುವ ಕಾಯಕದಲ್ಲಿ ಪಾಪಪುಣ್ಯ ಸ್ವರ್ಗ ನರಕವಿದೆ ಎನ್ನುತ್ತಾರೆ. ಇದು ಸತ್ಯವು ಹೌದು. ಶಾಸನಗಳಲ್ಲಿ ಈ ಪಾಪ ಪುಣ್ಯ ಶಾಪಾಶಯಗಳನ್ನು ಕೊನೆಯ ಭಾಗದಲ್ಲಿ ಫಲಶ್ರುತಿಯಲ್ಲಿ ನೋಡಬಹುದು. ವೇದಗಳಲ್ಲಿ ಪಾಪಗಳಿಗೆ 'ಮಹಾಪಾತಕಗಳು' ಎಂದು ಕರೆಯಲಾಗಿದೆ. ವಿಪ್ರ ಶಾಸನವೊಂದರಲ್ಲಿ ಈ ಧರ್ಮವನ್ನು ಸ್ವಧರ್ಮವೆಂದು ರಕ್ಷಿಸಿದವರಿಗೆ ಸಾವಿರ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿ ಪುಣ್ಯವು ಲಭಿಸುವುದು ಎಂದು ಉಲ್ಲೇಖವಿದೆ.[೪೮] ಇನ್ನೂ ಅನೇಕ ಬಿಟ್ಟಿರುವ ದಾನದತ್ತಿಗಳನ್ನು ಕಾಪಾಡಿದವರಿಗೆ ಶ್ರೇಯಸ್ಸು ಪುಣ್ಯ ಬರುತ್ತದೆ. ಆನೆಗೊಂದಿ ಶಾಸನವೊಂದರಲ್ಲಿ ಅಚ್ಯುತರಾಯನಿಗೆ ಪುಣ್ಯವಾಗಲೆಂದು ತಿಮ್ಮರಸಯ್ಯನವರು ಮಹೇಶ್ವರ ದೇವರಿಗೆ ದಾನ ನೀಡಿದ ಉಲ್ಲೇಖವಿದೆ.[೪೯] ಕನ್ನೆರುಮಡು ಶಾಸನವೊಂದರಲ್ಲಿ ಅಚ್ಯುತರಾಯನಿಗೆ ಪುಣ್ಯವಾಗಲೆಂದು ಸಾಳುವ ದೇವರಾಯರು ಕರುಮೂಡಿ ಯಲಬುರಿಗೆ ಸೀಮೆಯ ಸೇರುವ ಸೂಳೆಯ ಕೆರೆಯ ಇಕ್ಕಳ ಗದ್ದೆಯನ್ನು ದಾನ ನೀಡಿದ ಉಲ್ಲೇಖವಿದೆ.[೫೦] ಹನುಮನಾಳ ಶಾಸನವೊಂದರಲ್ಲಿ[೫೧] ಅಚ್ಯುತರಾಯನಿಗೆ ಪುಣ್ಯವಾಗಲೆಂದು ಚೊಮನ ಒಡೆಯ ಯಲಬುರಿಗೆ ನರಸಿಂಹ ದೇವರ ಅಮೃತಪಡಿಗೆ ಗ್ರಾಮವೊಂದನ್ನು ದಾನ ನೀಡಿತ್ತಾನೆ. ದಾನದತ್ತಿಗಳನ್ನು ಕಾಪಾಡಿದವರಿಗೆ ಶ್ರೇಯಸ್ಸು ಪುಣ್ಯ ಬರುತ್ತದೆ. ಹಾಳು ಮಾಡಿದವರಿಗೆ ಪಾಪಗಳು ಬರುತ್ತವೆ ಎಂದು ಸೂಚಿಸಲಾಗಿದೆ. ಹೆಚ್ಚಾಗಿ ಶಾಸನಗಳಲ್ಲಿ ಬೇರೆ ಬೇರೆ ಶಾಪಾಯಗಳು ಬಂದಿವೆ. ವಿಪ್ರ ಶಾಸನವೊಂದರಲ್ಲಿ ಈ ಧರ್ಮವನ್ನು ಹಾಳು ಮಾಡಿದವರಿಗೆ ೧೦೦೦ ಗೋವುಗಳನ್ನು ವದೆ ಮಾಡಿದ ಪಾಪವು ಬರುವುದು ಎಂದು ಉಲ್ಲೆಖವಿದೆ.[೫೨] ಹಿರೆಜಂತಗಲ್ ಶಾಸನವೊಂದರಲ್ಲಿ ಈ ದೇವರಾಯ ಮತ್ತು ಬ್ರಹ್ಮದಾಯ ರೂಪದ ಈ ಧರ್ಮಕ್ಕೆ ಯಾರಾದರೂ ತೊಡಕುಂಟು ಮಾಡಿದರೆ ಬ್ರಾಹ್ಮಣರನ್ನು ಕೊಲ್ಲುವುದು ಗೊವಧೆ ಸುವರ್ಣಸ್ತೇಯ (ಬಂಗಾರವನ್ನು ಕದಿಯುವುದು) ಈ ರೀತಿಯಾಗಿ ೫ ಮಹಾಪಾತಕ ಮಾಡಿದ ಪಾಪಕ್ಕೆ ಒಳಗಾಗುವದು ಎಂದು ಉಲ್ಲೇಖವಿದೆ.[೫೩] ಕನಕಗಿರಿ ಶಾಸನವೊಂದರಲ್ಲಿ ತೆರಿಗೆಗಳನ್ನು ಬಿಟ್ಟು ಸರ್ವೇಸಾಮಾನ್ಯವಾಗಿ ನೀಡಿದನು. ಇದನ್ನು ಪಾಲಿಸಿಕೊಂಡು ಹೋಗಬೇಕೆಂದು ಶಿಲಾಶಾಸನವು ಹೇಳುತ್ತದೆ.[೫೪] ಇದನ್ನು ಯಾರಾದರೂ ತಪ್ಪಿ ನಡೆದರೆ ವಾರಾಣಾಸಿಯಲ್ಲಿ ತನ್ನ ತಂದೆ ತಾಯಿಗಳನ್ನು ಕೊಂದ ಪಾಪಕ್ಕೆ ಗುರಿಯಾಗುವುದು ಎಂದು ಉಲ್ಲೇಖವಿದೆ. ಮತ್ತೊಂದು ಕನ್ನೆರುಮಡು ಶಾಸನವೊಂದರಲ್ಲಿ ಇದನ್ನು ಯಾರಾದರೂ ತಪ್ಪಿ ನಡೆದರೆ ಅವರು ತಮ್ಮ ತಂದೆ ತಾಯಿಯರನ್ನು ವಾರಾಣಾಸಿಯಲ್ಲಿ ಕೊಂದ ಪಾಪಕ್ಕೆ ಗುರಿಯಾಗುವರು ಎಂದು ಉಲ್ಲೇಖವಿದೆ.[೫೫] ನವಲಿ ಶಾಸನವೊಂದರಲ್ಲಿ ನಾಶವನ್ನು ನಾಶಮಾಡಿದವರು ವಾರಣಾಸಿಯಲ್ಲಿ ಕೊಂದ ಪಾಪಕ್ಕೆ ಗುರಿಯಾಗುವರು[೫೬] ಎಂದು ಉಲ್ಲೇಖವಿದೆ. ಹಳೆ ಅಯೋಧ್ಯ ಶಾಸನವೊಂದರಲ್ಲಿ ದಾನವನ್ನು ಈ ಶಾಸನಕ್ಕೆ ತಪ್ಪಿದವರು ವಾರಾಣಾಶಿಯಲ್ಲಿ ತಮ್ಮ ತಂದೆ ತಾಯಿಯರನ್ನು ಕೊಂದ ಪಾಪಕ್ಕೆ ಗುರಿಯಾಗುವರು.[೫೭] ಗುಡದಾಳ ಶಾಸನವೊಂದರಲ್ಲಿ ಗುಡವಳ್ಳಿ ವಿರುಪಾಕ್ಷಿ ದೇವರಿಗೆ ಸೇರಿದ್ದು ಇದಕ್ಕೆ ಯಾರಾದರೂ ತಪ್ಪಿ ನೀಡಿದರೆ ಗೋವು ಹತ್ಯೆ ಮತ್ತು ಬ್ರಾಹ್ಮಹತ್ಯಾಕ್ಕೆ ಪಾಪಕ್ಕೆ ಗುರಿಯಾಗುವರು.[೫೮] ಕಲಕೇರಿ ಶಾಸನವೊಂದರಲ್ಲಿ ವೀರನಿಗೆ ನೀಡಿದ ದಾನವನ್ನು ನಾಶಪಡಿಸಿದವರಿಗೆ ೧೮ ಪಟ್ಟಣಗಳನ್ನು ವಾರಾಣಾಸಿಯನ್ನು ನಾಶಮಾಡಿದ ಪಾಪಬರಲಿ ಎಂಬ ಶಾಪಾಶಯವಿದೆ.[೫೯]

ಒಂದು ಶಾಸನದಲ್ಲಿ ದಾನ ಮತ್ತು ಪಾಲನೆ ನಡುವೆ ವ್ಯಾತ್ಯಾಸ ಬಗ್ಗೆ ಉಲ್ಲೇಖವಿದೆ. ಒನೆಯ ವುಡಸಿ ನಾಯಕನು ಜೇನುಪುರ ಗ್ರಾಮವನ್ನು ದೇವರಿಗೆ ನಿತ್ಯ ದಾನ ನೀಡಿದ ವಿವರ ತಿಳಿಸುತ್ತದೆ. ತಾನು ನೀಡಿದ ದಾನದ ೩ಪಟ್ಟು ಪುಣ್ಯವು ಪರರು ಕೊಟ್ಟಿದಾನವನ್ನು ಪರಿಪಾಲಿಸುವುದರಿಂದ ದೊರಕುವುದು ಪರರ ದಾನವನ್ನು ಅಪರಿಹರಿಸುವದರಿಂದ ತಾನು ನೀಡಿದ ದಾನ. ಸಫಲವಾಗದು. ದಾನ ಮತ್ತು ಪಾಲನೆಯ ನಡುವೆ ದಾನಕ್ಕಿಂತ ಪಾಲನೆ ಶ್ರೇಷ್ಟವಾದದ್ದು ದಾನದಿಂದ ಸ್ವರ್ಗದೊರತರೆ ಪಾಲನೆಯಿಂದ ವೈಕುಂಠ ಪ್ರಾಪ್ತವಾಗುತ್ತದೆ ಎಂದು ಉಲ್ಲೇಖವಿದೆ.

**ಆತ್ಮಬಲಿಯ ಶಾಸನಗಳು :**

ಕರ್ನಾಟಕದಲ್ಲಿ ಬಲಿದಾನ ಮತ್ತು ಬಲಿ ಪದ್ಧತಿ ಎನ್ನುವುದು ಪುರಾತನ ಕಾಲದಿಂಲದಲೂ ಬೆಳೆದುಕೊಂಡು ಬಂದಿದೆ. ತಮ್ಮ ಹರಕೆಯ ದೇವರಿಗೆ ಹರಕೆಯನ್ನು ಹೊತ್ತುಕೊಂಡು ತಮ್ಮ ತಲೆಗಳನ್ನು ಅಥವಾ ದೇಹವನ್ನು ಅರ್ಪಿಸುವುದು ಚಿತೆಗೆ ಹಾರುವುದು ಇಂಥ ಆತ್ಮಬಲಿಯನ್ನು ನಾವು ಪ್ರಾಚೀನ ಕಾಲದಿಂದಲೂ ನೋಡುತ್ತಾ ಬಂದಿದ್ದೇವೆ. ಇದೊಂದು ಧರ್ಮದ ಹಿನ್ನೆಲೆ ನಡೆಯುವ ಪದ್ಧತಿಯಾಗಿದೆ. ಮರಣಕ್ಕೆ ಸಂಬಂಧಿಸಿದ ವಿಧಾನ ಪಾಲನೆಗಳನ್ನು ಪುರಾಣಗಳು, ಶಾಸನಗಳು, ಕೆಲವೊಮ್ಮೆ ಕಾವ್ಯಗಳು ಉಲ್ಲೇಖಿಸುತ್ತವೆ. ಈ ರೀತಿ ಆತ್ಮ ಬಲಿದಾನಗಳಲ್ಲಿ ಕೆಲವೊಂದು ಪ್ರಕಾರಗಳಲ್ಲಿ ಗುರುತಿಸಿಕೊಳ್ಳಬಹುದು. ಧಾರ್ಮಿಕ ಆತ್ಮಬಲಿ, ಲೌಖಿಕಬಲಿ, ನಂತರದಲ್ಲಿ ವೀರಗಲ್ಲು, ಮಹಾಸತಿಗಲ್ಲು ಎಂದು ವಿಭಾಗಿಸಿಕೊಳ್ಳಬಹುದು.

ಪ್ರಾಚೀನ ಯುದ್ಧಗಳಲ್ಲಿ ತಮ್ಮ ಪ್ರಾಣವನ್ನು ಲೆಕ್ಕಿಸದೆ ರಾಜನಾಗಿ ವೀರರು ಮಹಾತ್ಯಾಗ ಮಾಡಿದ ಪದ್ಧತಿಗಳಿದ್ದವು. ಇಂಥ ಪದ್ಧತಿಗಳನ್ನು ಆತ್ಮಬಲಿ ಎಂದು ಕರೆಯಬಹುದಾಗಿದೆ. ಇಂಥ ವೀರರ ನೆನಪಿಗಾಗಿ ನಿಲ್ಲಿಸಿದ ಸ್ಮಾರಗಳಲ್ಲಿ ಶಾಸನಗಳಲ್ಲಿ ಸಾಮಾನ್ಯವಾಗಿ ಶ್ಲೋಕ, ಉಲ್ಲೇಖವಾಗಿವೆ. ಪ್ರಾಚೀನರು ತಮ್ಮ ಅರಸನಿಗಾಗಿ ತನ್ನನ್ನೆ ಬಲಿಕೊಡುತ್ತಿದ್ದರೆಂದು ಹೇಳಬಹುದು ಇಂತಹ ಪದ್ಧತಿಯನ್ನು ಶಾಸನಗಳಿಂದ ಸ್ಪಷ್ಟಪಡಿಸಬಹುದು.

**೧. ಧಾರ್ಮಿಕ ಆತ್ಮಬಲಿ :**

ನಮ್ಮ ಸಂಸ್ಕೃತಿಯಲ್ಲಿ ಆತ್ಮಹತ್ಯ ಮಹಾಪಾಪವೆಂಬ ಕರೆದು ನಿಷೆದಿಸಿದೆ ಆದರೆ ಇತ್ತೀಚಿಗೆ ಆತ್ಮಹತ್ಯೆ ಹೆಚ್ಚಾಗಿ ಇದೊಂದು ಬೇರೆ ಅರ್ಥ ಪಡೆದುಕೊಂಡಿದೆ. ಆದರೂ ನಮ್ಮ ಸ್ಮೃತಿ ಪುರಾಣ, ಇತಿಹಾಸಗಳು ಕೆಲವು ಬಗೆಯ ಆತ್ಮಹತ್ಯೆಗಳನ್ನು ಅಥವಾ ದೇಹತ್ಯಾಗಗಳನ್ನು ಒಪ್ಪಿ ಮನ್ನಿಸಿದೆ. ಇವುಗಳಿಗೆ ಒಂದು ಸ್ಥಾನ ಅರ್ಥವನ್ನು ಕಲ್ಪಿಸಿದೆ. ಚಾಲುಕ್ಯರ ಕಾಲದಲ್ಲಿ ಒಬ್ಬ ಅರಸ ನದಿಯಲ್ಲಿ ಹಾರಿ ತನ್ನ ದೇಹತ್ಯಾಗವನ್ನು ಮಾಡಿಕೊಂಡಿರುವುದನ್ನು ನಾವು ನೋಡಬಹುದು.

**೨. ವೀರಗಲ್ಲುಗಳು :**

ವೀರಗಲ್ಲುಗಳು ಕನ್ನಡ ನಾಡಿನ ಶಾಸನಗಳಲ್ಲಿ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಇವುಗಳ ಜೊತೆಗೆ ಮಾಸ್ತಿಗಲ್ಲುಗಳು ಸೇರಿಸಬಹುದು. ಸಾಮಾನ್ಯವಾಗಿ ವೀರಗಲ್ಲುಗಳು ವೀರನ ಪರಾಕ್ರಮಾದಿಗಳನ್ನು

ಉಲ್ಲೇಖಿಸಿದೆ. ಈ ವೀರಗಲ್ಲುಗಳನ್ನು ೩ ಹಂತಗಳಲ್ಲಿ ನಿರ್ಮಿಸಿರುತ್ತಾರೆ. ೧. ಮೇಲಿನ ಹಂತದಲ್ಲಿ ಶಿವನ ಸಾನಿಧ್ಯದಲ್ಲಿರುವುದು ಚಿತ್ರಿತವಾಗಿರುತ್ತದೆ. ೨. ಮಧ್ಯದ ಹಂತದಲ್ಲಿ ಅವರನ್ನು ಕೈಲಾಸಕ್ಕೆ ದೇವತಾ ಸ್ತ್ರೀಯರು, ಕೊಂಡೊಯುವುದು ೩. ಕೆಳಗಿನ ಹಂತದಲ್ಲಿ ವೀರನ ಹೋರಾಟದ ಚಿತ್ರ ಮುಂತಾದ ವಿಷಯವನ್ನು ಹೇಳುವ ಸಂಸ್ಕೃತಿ ಶ್ಲೋಕವೊಂದು ಅನೇಕ ವೀರಗಲ್ಲು ವೀರಶಾಸನಗಳ ಅಂತ್ಯದಲ್ಲಿ ಕಾಣಬಹುದು. ಇದಕ್ಕೆ ಉದಾಹರಣೆ ಬಾದಾಮಿಯ ಕಪ್ಪೆ ಆರ್ಯಭಟ್ಟನ ಶಾಸನವನ್ನು ಕೊಡಬಹುದು. ಅಂದರೆ ಪ್ರಾಚೀನ ಜನಗಳ ಕಣ್ಣಲ್ಲಿ ರಾಜನೊಬ್ಬ ಅದ್ಭುತ ವ್ಯಕ್ತಿ (ಶಕ್ತಿ)ಯಾಗಿದ್ದನು. ಇಂತಹ ರಾಜ ಅಥವಾ ಸಾಮಂತರ ಹೆಸರನ್ನು ಶಾಸನದಲ್ಲಿ ಬರುತ್ತದೆ. ನಂತರದ ಇಂತಹ ವೀರಗಲ್ಲುಗಳು ಗಂಗಾವತಿ ತಾಲೂಕಿನಲ್ಲಿ ಕಂಡುಬರುತ್ತವೆ. ಒಟ್ಟಾರೆ ವೀರರ ಚಿತ್ರಗಳೇ ಹೆಚ್ಚಾಗಿದ್ದರು. ಎಲ್ಲವನ್ನು ವೀಕ್ಷಿಸಿದಾಗ ಗೋರರಕ್ಷಣೆಗಾಗಿ ಮಡಿದ ವೀರರ ಸ್ಮಾರಕಗಳು ಯುದ್ಧದಲ್ಲಿ ಹೋರಾಡಿ ನಾಡ ರಕ್ಷಣೆಗಾಗಿ ಸಾವನ್ನಪ್ಪಿದವರು ಸ್ಮರಣಾರ್ಥವಾಗಿ ನಿಲ್ಲಿಸಿರುವ ಸ್ಮಾರಕಗಳು ಕ್ರೂರ ಮೃಗಗಳ ಹಾವಳಿ ತಪ್ಪಿಸಲು ಬೇಟೆ ಆಡಿ ಸ್ವರ್ಗಸ್ಥರಾದವರು ನೆನಪಿನಲ್ಲಿ ನಿಲ್ಲಿಸಿರುವ ಕಲ್ಲುಗಳೆಂದು ಗುರುತಿಸಬಹುದು. ಆದರೆ ಒಂದು ಅರ್ಥದಲ್ಲಿ ರಾಜರು ಶತೃಗಳೊಂದಿಗೆ ಹೋರಾಡಿ ಮಡಿದ ಚಿತ್ರಗಳೇ ಹೆಚ್ಚಿನ ಕಲ್ಲುಗಳಲ್ಲಿ ಕಂಡುಬರುತ್ತದೆ. ಕನ್ನೆರು ಮಡು ಶಾಸನವೊಂದರಲ್ಲಿ ಖರೆಕುಲದ ಸಂಖಣ್ಣನ ಮಗ ಭರಮಣ ಕುದುರೆದಳದೊಡನೆ ಹೋರಾಡಿಸತ್ತಂತೆ ತಿಳಿಸುತ್ತದೆ.[೬೦]

**ತುರುಗೋಳ್ (ಗೊಗ್ರಹಣ) :**

ಯುದ್ಧ ಪ್ರಭೇದಗಳಲ್ಲಿ ಅತಿ ಮುಖ್ಯವಾದದ್ದು (ತುರುಗೊಳ) 'ತುರುಗೋಳ್' (ತುರು + ಕೊಳ್) 'ಕೋಳ' ಎಂಬುದು ತೆಗೆದುಕೋ ಎಂದರ್ಥದ 'ಕೊಳ್' ಧಾತುವಿನ ಭಾವನಾಮವಾಗಿದೆ. ಕಳ್ಳರು ಇದ್ದಕ್ಕಿದಂತೆಯೇ ಒಂದು ಊರಿನ ಮೇಲೆ ದಾಳಿ ಮಾಡಿ ಗೋವುಗಳನ್ನು (ಮುಖ್ಯವಾಗಿ ಹಸು, ಎಮ್ಮೆಗಳನ್ನು ಅಟ್ಟಿಸಿಕೊಂಡು ಹೋಗುವುದನ್ನು ಪ್ರಾಚೀನ ಕಾಲದ ಸ್ಮಾರಕಗಳಿಂದ ತಿಳಿಯಬಹುದು. ಈ ಸಮಯದಲ್ಲಿ ಸೆರೆ ಹಿಡಿದ ತುರುಗಳನ್ನು ಮರುಳಿಸುವ ಸಾಹಸದಲ್ಲಿ ಮಡಿದವರ ಸ್ಮಾರಕಗಳು ಹೆಚ್ಚಾಗಿ ದೊರೆಯುತ್ತವೆ. ಪ್ರಾಚೀನ ಕಾಲದಿಂದಲೂ ಹಸುಗಳು, ಗೋವುಗಳನ್ನು ದೇವರೆಂದು ಪೂಜಿಸುತ್ತದ್ದರು. ಇವುಗಳನ್ನು ರಕ್ಷಿತ ಸ್ಥಾನಗಳಲ್ಲಿ ಕಾಪಾಡಿಕೊಂಡು ಬರುತ್ತಿದ್ದರು. ಇಂತಹ ವಿಚಾರಗಳು ಗಂಗಾವತಿ ತಾಲೂಕಿನ ಶಾಸನಗಳಲ್ಲಿ ಕಂಡುಬರುತ್ತವೆ. ವಿಪ್ರ ಶಾಸನವೊಂದರಲ್ಲಿ ಈ ಧರ್ಮವನ್ನು ಸ್ವಧರ್ಮವೆಂದು ರಕ್ಷಿಸಿದವರಿಗೆ ಸಾವಿರ ಗೋವುಗಳನ್ನು ದಾನ ನೀಡಿದ ಪುಣ್ಯ ಲಭಿಸುವುದು ಎಂಬ ಉಲ್ಲೇಖವಿದೆ.[೬೧] ಓರೇಜಂತಕಲ್ ಶಾಸನದಲ್ಲಿ ಯಾರಾದರೂ ಗೋವುಗಳನ್ನು ಕೊಂದರೆ ಮತ್ತು ಅಪಹರಿಸಿದರೆ ಅವರು ೫೫ ಮಹಾ ಪಾಪಕ್ಕೆ ಒಳಗಾಗುವರು ಎಂದು ಉಲ್ಲೇಖವಿದೆ.[೬೨] ವಿರೂಪಾಕ್ಷ ದೇವರಿಗೆ ಸೇರಿದ್ದು ಗುಡದಾಳ ಶಾಸನವೊಂದರಲ್ಲಿ ಇದಕ್ಕೆ ಯಾರಾದರೂ ತಪ್ಪಿ ನಡೆದರೆ ಗೋವು ಹತ್ಯ ಪಾಪಕ್ಕೆ ಗುರಿಯಾಗುವರು ಎಂಬ ಉಲ್ಲೇಖವಿದೆ.[೬೩] ಈಗಲೂ ಸಹ ಇಂತಹ ನಂಬಿಕೆ ಇದೆ. ಇವುಗಳಲ್ಲಿ ೩ ಅಂಶಗಳನ್ನು ಕಾಣಬಹುದು. ಮೊದಲು ಗೋವುಗಳು ಪೂಜನಿಯುಮವಾದದ್ದು ಇವು ಕಳೆದುಕೊಳ್ಳಬಾರದಂತಹ ಆಸ್ತಿಯಾಗಿದೆ. ಇವುಗಳನ್ನು (ಅಪಹರಿಸಿದಂತೆ ನೋಡಿಕೊಳ್ಳುವುದು) ಊರಿನ ವ್ಯಕ್ತಿಯ ಮಾನದ ಪ್ರಶ್ನೆಯೂ ಆಗಿತ್ತು

ಆದ್ದರಿಂದ ಇವುಗಳನ್ನು ಕಾಪಾಡುವುದು ಆರಾಧನ ಧರ್ಮವಾಗಿತ್ತು. ಇಂತಹ ಗೋಗ್ರಹಣ ಮತ್ತು ತುರುಗೋಳ್ ಸ್ಮಾರಕಗಳು ಇಲ್ಲಿಯ ಕಂಡುಬಂದಿದೆ.

**ಜೋಳವಾಜಿ (ಜೋಳವಾಳಿ) :**

ಕರ್ನಾಟಕದ ಕೆಲವು ಭಾಗಗಳ ಜೋಳ ಪ್ರಮುಖವಾದ ಬಂದು ಬೆಳೆ ಮತ್ತು ಒಂದು ಆಹಾರ ಪದಾರ್ಥ (ಧಾನ್ಯ) 'ಪಾಳಿ' ಎಂದರೆ ಕರ್ತವ್ಯ ಕ್ರಮ ಅಥವಾ ಕ್ರಮ ಪಾಲನೆಯ ಧರ್ಮ ಇದನ್ನು ತೆಲುಗಿನಲ್ಲಿ ಪಾಡಿ ಎಂದು ಕರೆದರೆ ಸಮ್ಯಾತದಲ್ಲಿ ಪಾರಿ (ಪಾಳಿ) 'ಜೋಳವಾಳಿ' ಎಂದರೆ ಜೋಳಪಾಳಿ ಅನ್ನದ ಕರ್ತವ್ಯ ಅನ್ನದ ಋಣ ಎಂದರ್ಥ ಈಗಿನ ಉಪ್ಪಿನ ಹಂಗು ಇದ್ದಂತೆ ಅಂದರೆ ಉಪ್ಪು ತಿಂದ ಮನೆಗೆ ಎರಡು ಬಗೆಯಬಾರದು ತೆಲುಗಿನಲ್ಲಿ ಇದಕ್ಕೆ ಸಮಾನವಾದ ಎತ್ತಿ ಎಂದರೆ ಜೊನ್ನಲು ಗೊನ್ನೆ ಋಣಂ (ಜೊನ್ನಲು ಜೋಳ) ಅನ್ನವನ್ನು ಕೊಟ್ಟು ಸಾಕಿದ ಒಡೆಯನಿಗೆ ಕಷ್ಟ ಬಂದಾಗ ಅವನಿಂದ ವಿಪಕ್ಷತನಾಗಿರುವ ವ್ಯಕ್ತಿ ಒಡೆಯನಾಗಿ ಸಹಾಯ ಮಾಡಬೇಕು. ಯುದ್ಧವು ಬದಗಿದಾಗ ಅವನ ಪರವಾಗಿ ಹೋರಾಡಬೇಕು. ಇದೇ ಜೋಳವಾಳಿ. ಇದು ಕರ್ತವ್ಯವನ್ನು ಪರಿಪಾಲಿಸುವ ವ್ಯಕ್ತಿಯನ್ನು ಸೂಚಿಸುತ್ತದೆ. ಪಂಪಾಭಾರತದಲ್ಲಿಯೂ ಹಲವು ಕಡೆ ಜೋಳದ ಪಾಲಿಯ ಪ್ರಸ್ತಾಪ ಬರುತ್ತದೆ.

**೩. ಲೌಕಿಕ ಆತ್ಮ ಬಲಿದಾನಗಳು :**

**೧. ಮಹಾಸತಿಗಲ್ಲುಗಳು :**

ಇವುಗಳನ್ನು ಮಾಸ್ತಿಕಲ್ಲುಗಳ ಎಂತಲೂ ಕರೆಯುತ್ತಾರೆ. ಸಾಮಾನ್ಯವಾಗಿ ನಮ್ಮ ಪ್ರಾಚೀನ ಸಮಾಜ (ಸಂಸ್ಕೃತಿ)ದಲ್ಲಿ ಇದೊಂದು ಆಚರಣೆ ಪದ್ಧತಿ ನಂಬಿಕೆಯಾಗಿತ್ತು. ದೇವನಿಗಾಗಿ ಕೈಗೊಳ್ಳುವ ಬಲಿದಾನ ಪ್ರಿಯ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ ಪತಿಯ ಸಲುವಾಗಿ ಸ್ತ್ರೀ ಕೈಗೊಂಡ ಪ್ರಾಣತ್ಯಾಗಕ್ಕೆ ನಮ್ಮಲ್ಲಿ ಅನೇಕ ನಿದರ್ಶನಗಳಿವೆ. ಶಾಸನಗಳಲ್ಲಿ ಉಲ್ಲೇಖಗಳು ಬಂದಿವೆ. ಸತಿಯ ಮಹಾಸತಿ ತನ್ನ ಒಡೆಯ ಮತ್ತು ಸತಿಗಾಗಿ ಪತಿಯು ಯಾವುದೇ ರೀತಿಯ ಮರಣ ನಂತರ ಮಡದಿ ಪ್ರಮುಖವಾಗಿ ಅಗ್ನಿಪ್ರವೇಶದ ಮೂಲಕ ಗೌಣವಾಗಿ ಇತರ ವಿಧಾನಗಳ ಮೂಲಕ ತನ್ನ ಪ್ರಾಣವನ್ನು ಬಲಿಕೊಡುತ್ತಿದ್ದವು ಹೀಗೆ ಪ್ರಾಣವನ್ನು ಅರ್ಪಿಸುವಳೇ ಮಹಾಸತಿ 'ಮಾಸ್ತಿ' ಇದರ ತದ್ಭವರೂಪ ಮಹಾಸತಿ ಇಂತಹ ಮಾಸ್ತಿ ಅಥವಾ ಮಾಸ್ತಿಕಲ್ಲುಗಳಲ್ಲಿ ಪ್ರಮುಖ ಕಾರಣಗಳನ್ನು ಹೆಸರಿಸಬಹುದು. ಮರಣ ಹೊಂದಿದ ವ್ಯಕ್ತಿಯು ಕೂಡ ಅವನಿಗೆ ಇಷ್ಟವಾದ ಸ್ವರೂಪ ವಸ್ತುಗಳನ್ನು ಇಡುವದು ಗಂಡ ಸಾಯುವುದರಿಂದ ಗಂಡನಿಗೆ ಸ್ವರ್ಗ ಪ್ರಾಪ್ತಿಯಾಗುವುದಲ್ಲದೆ ತಾನು ಸ್ವರ್ಗ ಪ್ರಾಪ್ತಿ ಪಡೆದು ಮುಂದಿನ ಜನ್ಮದಲ್ಲಿ ಮತ್ತು ಪತಿಪತ್ನಿಯಾಗಿ ಹುಟ್ಟುವುದು ಗಂಡನ ಮರಣದ ತರುವಾಯ ಸ್ತ್ರೀ ಬದುಕಿನಲ್ಲಿ ಎದುರಿಸಬಹುದಾದ ಜೀವರಕ್ಷಣೆ ಮಾನರಕ್ಷಣೆಗಳ ಭಯ ತಾನು ಮಾಡಿದ ನಂತರ ತನ್ನ ಮಡದಿ ಪುರುಷನ ವಶವಾಗಬಾರದು ಅಥವಾ ತನ್ನಿಂದ ಅಗಲಬಾರದು ಎಂಬ ಪುರುಷನ ಸ್ವಾರ್ಥ (ಭಾವನೆ) ಸತಿಪತಿಯೊಂದಿಗೆ ಪತ್ನಿಯನ್ನು ಮರಣಕ್ಕೆ ದೂಡಿ ಅವಳ ಆಸ್ತಿಯನ್ನು ಅಪಹರಿಸಿಕೊಳ್ಳುವ ಹಂಚಿಕೆ ಇಂತ ಕಾರಣಗಳನ್ನು ಕಾಣಬಹುದು. ಏನೇ ಕಾರಣವಿದ್ದರು ಪುರೋಹಿತ ಮತ್ತು ಪ್ರಭುವಂತ ಒತ್ತಾಯದ ಮೇರೆಗೆ ಮುಗ್ಧ ಸ್ತ್ರೀಯರು ಬಲವಂತ ಒತ್ತಾಸೆಗೆಳಿಂದಾಗಿ ಈ ಪದ್ಧತಿ ಒಂದೆ ಸಮಾಜದಲ್ಲಿ ಒಂದು ಮೌಲ್ಯವಾಗಿ ಪರಿಣಮಿಸಿತು. ಇದರಲ್ಲಿ

ಎರಡು ರೀತಿಯ ಮಾಸ್ತಿ ಕಲ್ಲುಗಳನ್ನು ಗುರುತಿಸಬಹುದು. ಸಹಗಮನ ಮತ್ತು ಅನುಗಮನ ಪದ್ಧತಿ ಮರಣ ಹೊಂದಿದ್ದ ಪತಿಯ ಶವದೊಡನೆ ಅಗ್ನಿಪ್ರವೇಶಸುವುದು ಶವ ಸಿಗದೆ ಹೋದರೆ ಆತನ ಪ್ರಿಯವಾದ ಒಂದು ವಸ್ತುವಿನನೊಡನೆ ಅಗ್ನಿ ಪ್ರವೇಶ ಮಾಡುವುದು ಇಲ್ಲಿ ಇಂತಹ ವಿವರಣೆ ಕೊಡುವ ಕೆಲವೊಂದು ಮಾಸ್ತಿಕಲ್ಲುಗಳು ಕಂಡುಬಂದಿದೆ. ಸ್ತ್ರೀಯರ ಸಹ ರಾಜನೊಂದಿಗೆ ಕೈಗೊಂಡ ಯುದ್ಧದಲ್ಲಿ ಆಕ್ರಮಣಕಾರರನ್ನು ಎದುರಿಸಿ ಸಾವನ್ನಪ್ಪಿದ ವೀರ ಮಹಿಳೆಯರೆಂದು ಗುರುತಿಸಿ ನಿಲ್ಲಿಸಿರುವ ಕಲ್ಲುಗಳು ಎಂದು ಕೆಲವೊಂದನ್ನು ಹೀಗೆ ವಿವರಿಸಬಹುದು. ಆನೆಗೊಂದಿ ಶಾಸನವೊಂದರಲ್ಲಿ ಗಂಡಸತ್ತಾಗ ರಾಣಿ ಶ್ರೀ ರಂಗಮ್ಮ ತಾನು ಕೂಡ ಮಹಾಸತಿಯಾಗಿ ಬೆಂಕಿಯಲ್ಲಿ ಬಿದ್ದು ಸತ್ತಿರಬಹುದು ಎಂದು ಹೇಳಬಹುದು.[೧೬] ಅದೇ ಊರಿನ ಶಾಸನವೊಂದರಲ್ಲಿ ಭಯಿರಿಸೆಟ್ಟಿ ಮಗ ನಾಗಿಸೆಟ್ಟಿಯ ಹೆಂಡತಿ ತಿಂಮಾಯಿ ತನ್ನ ಗಂಡ ಸತ್ತಾಗ ಕಿಚ್ಚಿ ಹಾಯ್ದು ಸತ್ತ ವಿಷಯ ತಿಳಿಸುತ್ತದೆ.[೧೭]

**ಟಿಪ್ಪಣಿಗಳು**

೧. ಕರ್ನಾಟಕ ಪರಂಪರೆ, ಸಂ ೧ ಸಂ, ೧೯೯೨, ಪುಟ ೪೩೨

೨. ಕ.ವಿ.ವಿ ಸಂ ೨ ಗಂಗಾವತಿ ತಾ ೧

೩. ಅದೇ ೩

೪. ಅದೇ ೩೭

೫. ಅದೇ ೬೮

೬. ಅದೇ ೯೪

೭. ಅದೇ ೩

೮. ಅದೇ ೭೩

೯. ಕರ್ನಾಟಕ ಪರಂಪರೆ ಸಂ ೧ (ಸಂ) ಪುಟ ೫೨೧

೧೦. ಕ.ವಿ.ವಿ ಸಂ ೨ ಗಂಗಾವತಿ ತಾ, ೨

೧೧. ಅದೇ ೯೧

೧೨. ಅದೇ ೪೯

೧೩. ಅದೇ ೫೧

೧೪. ಅದೇ ೫೭

೧೫. ಅದೇ ೫೮

೧೬. ಅದೇ ೩೭

೧೭. ಕರ್ನಾಟಕ ಪರಂಪರೆ, ಸಂ ೧, (ಸಂ) ಪುಟ ೩೩೯

೧೮. ಕ.ವಿ.ವಿ, ಸಂ ೨, ಗಂಗಾವತಿ ತಾ, ೧೭

೧೯. ಅದೇ ೬೦

೨೦. ಅದೇ ೧೮

೨೧. ಅದೇ ೯೩

೨೨. ಅದೇ ೧೭

೨೩. ಅದೇ ೨೫

೨೪. ಅದೇ ೧೫

೨೫. ಕ.ವಿ.ವಿ, ಸಂ ೨, ಗಂ ತಾ, ೭೮

೨೬. ಅದೇ ೭೯

೨೭. ಅದೇ ೭೫

೨೮. ಅದೇ ೮೯

೨೯. ಅದೇ ೭೮

೩೦. ಅದೇ ೭೩

೩೧. ಅದೇ ೫೩

೩೨. ಅದೇ ೨

೩೩. ಕ.ವಿ.ವಿ, ಸಂ ೨, ಗಂ ತಾ, ೧೦೪

೩೪. ಅದೇ ೨೮

೩೫. ಅದೇ ೭೫

೩೬. ಅದೇ ೯೦೨

೩೭. ಅದೇ ೮೯

೩೮. ಅದೇ ೫೫

೩೯. ಅದೇ ೬೦

೪೦. ಅದೇ ೯೧

೪೧. ಅದೇ ೧

೪೨. ಅದೇ ೬೦

೪೩. ಕ.ವಿ.ವಿ, ಸಂ ೨, ಗಂ ತಾ, ೧೦೪

೪೪. ಅದೇ ೧

೪೫. ಅದೇ ೩

೪೬. ಅದೇ ೩೭

೪೭. ಅದೇ ೩೯

೪೮. ಅದೇ ೮೧

೪೯. ಅದೇ ೧

೫೦. ಅದೇ ೫೪

೫೧. ಅದೇ ೯೦

೫೨. ಅದೇ ೯೧

೫೩. ಅದೇ ೧

೫೪. ಅದೇ ೪೪

೫೫. ಅದೇ ೬೦

೫೬. ಅದೇ ೯೧೩

೫೭. ಅದೇ ೯೪

೫೮. ಅದೇ ೧೦೪

೫೯. ಅದೇ ೧೦೮

೬೦. ಅದೇ ೭೮

೬೧. ಅದೇ ೧೦೬

೬೨. ಅದೇ ೯೦

೬೩. ಅದೇ ೧

೬೪. ಅದೇ ೩

೬೫. ಅದೇ ೧೦೮

## ಅಧ್ಯಾಯ ಎಂಟು

### ಉಪಸಂಹಾರ

ಶಾಸನಶಾಸ್ತ್ರ ಒಂದು ಚಿನ್ನದಗಣಿ ಇದ್ದ ಹಾಗೆ ನಾವು ಚಿನ್ನದಗಣಿಯನ್ನು ಯಾವ ರೀತಿ ಅಗೆಯುತ್ತ ಹೋದಂತೆ ಅದರಲ್ಲಿನ ಚಿನ್ನ ಹೊರಡುತ್ತದೆಯೋ ಅದೇ ರೀತಿ ಶಾಸನಗಳ ಕುರಿತು ಸಂಶೋಧನೆ ನಡೆಸಿದಂತೆ ಅದರಲ್ಲಿನ ವಿಷಯವು ಸಂಪೂರ್ಣವಾದ ಆಳವಾದ ಪರಿಚಯ ನಮಗಾಗುತ್ತದೆ. ಅಂದರೆ ಇತಿಹಾಸ ರಚನೆಗೆ ಶಾಸನಗಳೇ ಆಧಾರ.

ಕರ್ನಾಟಕ ಇತಿಹಾಸ ರಚನೆಗೆ ಶಾಸನಗಳನ್ನು ಬಿಟ್ಟರೆ ಮುಖ್ಯವಾದ ಮತ್ತು ಇಷ್ಟೊಂದು ವಿಷಯಗಳನ್ನು ಒಳಗೊಡು ಇತಿಹಾಸ ಸಾಮಗ್ರಿಯು ಸಿಗುವುದು ವಿರಳ. ಮುಸ್ಲಿಂ ರಾಜಮನೆತನಗಳು ಕರ್ನಾಟಕದಲ್ಲಿ ತಲೆಎತ್ತಿದ ಕಾಲದಿಂದ ಇತಿಹಾಸ ರಚನೆಗೆ ಮುಸ್ಲಿಂ ಚರಿತ್ರೆಕಾರರ ಗ್ರಂಥಗಳು ಬಹು ಕಡಿಮೆ. ಅವುಗಳೂ ಕೂಡ ಸಾಹಿತ್ಯಿಕ ದೃಷ್ಟಿಯನ್ನು ಹೊದಿದ್ದು. ಇತಿಹಾಸ ರಚನೆಗೆ ಅನುಕೂಲಕರವಾಗಿಲ್ಲ. ಹೀಗಾಗಿ ಕರ್ನಾಟಕ ಇತಿಹಾಸ ರಚನೆಗೆ ನಾವು ಮುಖ್ಯವಾಗಿ ಶಾಸನಗಳನ್ನು ಅವಲಂಬಿಸಬೇಕುಗುತ್ತದೆ.

ಕರ್ನಾಟಕದ ಶಾಸನಗಳು ರಾಜಕೀಯ ಇತಿಹಾಸವನ್ನು ಕುರಿತು ವಿಶೇಷ ಮಾಹಿತಿಯನ್ನು ನೀಡುತ್ತವೆ. ಸಾಮಾನ್ಯವಾಗಿ ಶಾಸನದ ಉದ್ದೇಶ ಏನೆ ಆಗಿದ್ದರೂ ಅದು ದಾನ ಶಾಸನವೇ ಆಗಿದ್ದರೂ ಅದರ ಮೊದಲ ಭಾಗದಲ್ಲಿ ಆಳುವ ರಾಜನ ಮತ್ತು ಅವನ ಹಿಂದಿನವರ ರಾಜಕೀಯ ಸಾಧನೆಗಳನ್ನು ತಿಳಿಸುತ್ತದೆ. ಈ ಭಾಗದಿಂದ ಚರಿತ್ರಕಾರನು ರಾಜಕೀಯ ಇತಿಹಾಸವನ್ನು ರಚಿಸುತ್ತಾನೆ. ಅದೇ ರೀತಿ ಆಳುತ್ತಿರುವ ರಾಜನ ರಾಜ್ಯಭಾರದ ಯಾವ ವರ್ಷದಲ್ಲಿ ಶಾಸನವು ಹುಟ್ಟಿತು ಎಂದು ತಿಳಿಸುವುದರಿಂದ ರಾಜನು ಪಟ್ಟಕ್ಕೆ ಬಂದ ವರ್ಷ. ಅವನು ಆಳಿದ ವರ್ಷ ಮುಂತಾದವು ಸುಲಭವಾಗಿ ತಿಳಿಸುತ್ತವೆ. ಸಾಮಾನ್ಯವಾಗಿ ಶಾಸನಗಳಲ್ಲಿ ಸತ್ಯದ ಜೊತೆಗೆ ಹೊಗಳಿಕೆ ಸೇರಿರುವುದರಿಂದ ಹೊಗಳಿಕೆ ಯಾವುದು

ನಿಜವಾದ ಸಾಧನೆ ಯಾವುದು ಎಂಬುದರ ಶಾಸನಗಳ ಪರಿಚಯ ಇರುವ ಇತಿಹಾಸಕಾರ ಗುರುತಿಸಬಲ್ಲ. ಈ ವಿಷಯದಲ್ಲಿ ಇತಿಹಾಸಕಾರ ಬಹಳ ಜಾಗರೂಕನಾಗಿರಬೇಕು.

ಕರ್ನಾಟಕದ ಆಡಳಿತವನ್ನು ತಿಳಿಯುವಲ್ಲಿ ಶಾಸನಗಳಲ್ಲಿ ಮುಖ್ಯ ಆಧಾರಗಳು ಮಂತ್ರಿಗಳು ವಿವಿದ ಶಾಖೆಗಳು ಅವುಗಳ ಅಧಿಕಾರಿಗಳು ಅವರ ಕರ್ತವ್ಯಗಳು ಸೈನದ ಆಡಳಿತ ರಾಜ್ಯದ ಆದಾಯ ತೆರಿಗೆಗಳು ಮುಂತಾದವುಗಳು ಶಾಸನಗಳಲ್ಲಿ ವಿಶೇಷವಾಗಿ ಉಲ್ಲೇಖಿತವಾಗಿರುತ್ತದೆ. ಅದರಲ್ಲಿಯೂ ರಾಜ್ಯದ ಆರ್ಥಿಕ ಪರಿಸ್ಥಿತಿ ಮತ್ತು ಸರಕಾರಕ್ಕೆ ಕೊಡಬೇಕಾದ ತೆರಿಗೆಗಳ ವಿಷಯದಲ್ಲಿ ಶಾಸನಗಳು ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ. ಸಾರಿಗೆ ಮನೆಯ ತೆರಿಗೆ, ಮದುವೆ ತೆರಿಗೆ, ಸೊಸೆ ಪೆರ್ಜುಂಕ ಪನ್ನಾಯ, ದಾಯ, ತುಪ್ಪದರೆ ಇತ್ಯಾದಿ ಸುಂಕಗಳು ಮತ್ತು ತೆರಿಗೆಗಳು ಹೀಗೆ ನೂರಾರು ತೆರಿಗೆಗಳು ನಮ್ಮ ಗಮನಕ್ಕೆ ಬರುತ್ತವೆ. ಇದೆ ರೀತಿಯಲ್ಲಿ ಅಳತೆ ಮತ್ತು ತೂಕಗಳು ಶಾಸನಗಳಲ್ಲಿ ಕಂಡುಬರುತ್ತವೆ.

ಆಡಳಿತದ ಅನುಕೂಲಕ್ಕೆ ರಾಜ್ಯವನ್ನು ವಿವಿಧ ಪ್ರಾಂತಗಳನ್ನಾಗಿ ಜಿಲ್ಲೆಗಳನ್ನಾಗಿಯೂ ಜಿಲ್ಲೆಗಳನ್ನು ಇನ್ನೂ ಸಣ್ಣ ಭಾಗಗಳನ್ನಾಗಿಯೂ ವಿಭಾಗಿಸುತ್ತಿದ್ದರು. ಕರ್ನಾಟಕ ಶಾಸನಗಳಲ್ಲಿ ಕಾಣಬರುತ್ತವೆ.

ಉದಾ. ಬನವಾಸಿ - ೧೨೦೦೦, ನೊಳಂಬವಾಡಿ - ೩೨೦೦೦, ಬೆಳ್ವೊಲ - ೩೦೦, ಪುಲಿಗೆರೆ - ೩೦೦, ಎಡನಾಡು - ೭೦, ಬಾಗೆ - ೫೦ ಇತ್ಯಾದಿ ಇವುಗಳ ರಾಜ್ಯದ ವಿವಿಧ ನಾಡುಗಳೆಂದು ತಿಳಿದುಬಂದಿದೆ. ಇವುಗಳ ಜೊತೆಯಲ್ಲಿರುವ ಮತ್ತು ಸಂಖ್ಯೆಗಳು ಏನನ್ನು ಸೂಚಿಸುತ್ತದೆ. ಎಂಬುದಾಗಿ ಸರಿಯಾಗಿ ತಿಳಿದುಬಂದಿಲ್ಲ ಅವುಗಳ ಸಂಖ್ಯೆ ಎಂದೂ ಇನ್ನೂ ಕೆಲವರು ನಾಡಿನ ಆದಾಯವೆಂದು ಹೇಳುತ್ತಾರೆ.

ಸಾಮಾಜಿಕ ಸ್ಥಿತಿಗಳನ್ನು ತಿಳಿಸುವುದು ಶಾಸನಗಳ ಕರ್ತವ್ಯವಲ್ಲದಿದ್ದರೂ ಪ್ರಾಸಂಗಿಕವಾಗಿ ಅದರ ಬಗೆಗೆ ಮಾಹಿತಿ ಅಲ್ಲಲ್ಲಿ ದೊರೆಯುವುದರಿಂದ ಇತಿಹಾಸಕಾರನು ಇವುಗಳ ಸಹಾಯದಿಂದ ಸಾಮಾಜಿಕ ಇತಿಹಾಸ ರಚನೆಗೆ ಸಹಾಯಕವಾಗುತ್ತದೆ. ಧರ್ಮವೇ ಶಾಸಗಳಿಗೆ ಮೂಲವಾದುದ್ದರಿಂದ ಮತಿಯ ಮತ್ತು ಧಾರ್ಮಿಕ ವಿಷಯಗಳು ಪ್ರತಿ ಶಾಸನದಲ್ಲಿಯೂ ದೊರೆಯುತ್ತವೆ. ಬೌದ್ಧ, ಜೈನ, ಶೈವ, ವೈಷ್ಣವ, ಕಾಪಾಲಿಕ ಮುಂತಾದ ಎಲ್ಲ ಧರ್ಮಗಳ ಇತಿಹಾಸವನ್ನು ಶಾಸನಗಳಿಂದ ತಿಳಿಯುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಭಾಷಾ ಚರಿತ್ರೆಯನ್ನು ತಿಳಿಯಲು ಸಾಹಿತ್ಯಕ ಗ್ರಂಥಗಳು ಮುಖ್ಯ ಪಾತ್ರವಹಿಸುತ್ತದೆ. ಅನೇಕ ಗ್ರಂಥಗಲು ನಮಗೆ ಇನ್ನೂ ದೊರಕಿಲ್ಲ. ಓಲೆಗರಿಯ ಮೇಲಿದ್ದ ಅನೇಕ ಗ್ರಂಥಗಳು ನಾಶವಾಗಿ ಹೋಗಿ ಅವುಗಳ ಪರಿಚಯವೇ ನಮಗೆ ಇಲ್ಲವಾಗಿದೆ. ಆದರೆ ಶಾಸನಗಳು ಕಲ್ಲು ಮತ್ತು ತಾಮ್ರದಂತಹ ಗಟ್ಟಿ ವಸ್ತುಗಳ ಮೇಲೆ ಬರೆದಿರುವುದರಿಂದ ಆಯಾ ಕಾಲದ ಕನ್ನಡ ಭಾಷೆಯ ಲಕ್ಷಣಗಳನ್ನು ತಿಳಿಸುವಲ್ಲಿ ತುಂಬಾ ಸಹಾಯಕಾರಿಯಾಗಿದೆ. ಆಗಲೇ ಗಮನಿಸಿರುವಂತೆ ಕ್ರಿ.ಶ. ೫ನೆಯ ಶತಮಾನದ ಕನ್ನಡ ಭಾಷೆಯನ್ನು ತಿಳಿಯಲು ಹಲ್ಮಿಡಿಶಾಸನವೇ ಆಧಾರವಾಗಿದ. ನೃಪತುಂಗನಿಂದ ರಚಿತವಾದ ಕವಿರಾಜಮಾರ್ಗವೆ ನಮಗೆ ಇದುವರೆಗೆ ದೊರೆತಿರುವ ಮೊದಲ ಕನ್ನಡ ಗ್ರಂಥ ಅದಕ್ಕಿಂತ ಕನ್ನಡ ಭಾಷಾ ಬೆಳವಣಿಗೆಯನ್ನು ತಿಳಿಯಲು ನಾವು ಶಾಸನಗಳನ್ನೆ ಅವಲಂಬಿಸಬೇಕಾಗುತ್ತೆದೆ. ಭಾಷಾ ಶಾಸ್ತ್ರಗಳ ದೃಷ್ಟಿಯಿಂದ ಶಾಸನಗಳು ಭಾಷಾಶಾಸ್ತ್ರ ಬಹು ಮುಖ್ಯ ಮಾಹಿತಿಗಳನ್ನು ಒದಗಿಸುತ್ತವೆ.

ಸಾಹಿತ್ಯ ಗ್ರಂಥಗಳಲ್ಲಿ ಕಾಣಬರದೇ ಇರುವ ನೂರಾರು ಕವಿಗಳ ಹೆಸರುಗಳನ್ನು ಶಾಸನಗಳು ಒದಗಿಸುತ್ತವೆ. ಅಷ್ಟೇ ಅಲ್ಲದೇ ಅನೇಕ ಶಾಸನಗಳು ಉತ್ತಮ ವರ್ಗದ ರಾಜ್ಯಗಳಾಗಿವೆ. ಆದುದರಿಂದ ಸಾಹಿತ್ಯ ಚರಿತ್ರೆಯಲ್ಲಿಯೂ ಶಾಸನಗಳ ಪಾತ್ರ ಮುಖ್ಯವಾದವು. ಈ ರೀತಿ ಕರ್ನಾಟಕ ಇತಿಹಾಸ ಮತ್ತು ಸಾಹಿತಿಯನ್ನು ಅಧ್ಯಾನಕ್ಕೆ ಶಾಸನಗಳು ಮಹತ್ತರವಾದ ಕೊಡುಗೆಯನ್ನು ನೀಡಿವೆ.

# ಅನುಬಂಧಗಳು

## ಕನ್ನಡ ಗ್ರಂಥಗಳು

೧. ಹುಣಸಗಿ ಪ್ರಕಾಶ, ೧೯೮೭, 'ಗಂಗಾವತಿ ತಾಲೂಕು ದರ್ಶನ'

೨. ಅಪರಂಜಿ ಎಸ್.ಆರ್, ೧೯೮೨, ಕರ್ನಾಟಕ ಇತಿಹಾಸ, ವಿಜಯ ಬುಕ್ ಹೌಸ್, ಗದಗ

೩. ಶರಣಪ್ಪ ಪಿ, ೧೯೯೪, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು

೪. ರಾಮಚಂದ್ರರಾವ್ ಎಸ್.ಕೆ, ೧೯೯೫, ಮೂರ್ತಿಶಿಲ್ಪ ನೆಲೆ ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೫. ಸುಂದರ ಅ, ೧೯೭೩, ಗಂಗಾವತಿ ತಾಲೂಕಿನ ಪ್ರಾಚ್ಯವಸ್ತುಗಳು ಕರ್ನಾಟಕ ಭಾರತಿ ಸಂಪುಟ ೬, ಸಂಚಿಕೆ ೧, ಕನ್ನಡ ವಿಶ್ವವಿದ್ಯಾಲಯ

೬. ಸುಂದರ ಅ, ೧೯೭೪, ಕರ್ನಾಟಕದಲ್ಲಿಯ ಪ್ರಾಗೈತಿಹಾಸಿಕ ವರ್ಣಚಿತ್ರಗಳು

೭. ವಿಲಾಸ ಎಂ ಜೊಗುಳ, ಕುಷ್ಟಗಿ ತಾಲೂಕು ಪೂರ್ವಭಾಗ ಹಾಗೂ ಲಿಂಗಸೂರ ತಾಲೂಕು ದಕ್ಷಿಣ ಭಾಗದ ಪ್ರಾಚ್ಯ ಅವಶೇಷಗಳ ಅನ್ವೇಷಣೆ ಮತ್ತು ಅಧ್ಯಯನ, ಪ್ರಕಾಶನ

೮. ದಿ.ಬಿ.ಕರಡೋಣಿ, ಆನೆಗೊಂದಿ ಸಂಸ್ಥಾನ ಒಂದು ಅಧ್ಯಯನ

೯. ಚೆನ್ನಬಸಪ್ಪ ಎಸ್ ಪಾಟೇಲ್, ಕರ್ನಾಟಕ ಕೋಟೆಗಳು ಸಂಪುಟ ೧

೧೦. ದೇವರಕೊಂಡಾರೆಡ್ಡಿ, ಲಿಪಿಯ ಹುಟ್ಟು ಮತ್ತು ಬೆಳವಣಿಗೆ

೧೧. ದೇಸಾಯಿ ಪಿ.ಬಿ, ೧೯೭೩, ಪ್ರಾಚೀನ ಭಾರತದ ಚರಿತ್ರೆ

೧೨. ಹಿರೇಮಠ ಬಿ.ಆರ್, ೧೯೭೭, ವೀರಗಲ್ಲು, ಕನ್ನಡ ವಿಶ್ವವಿದ್ಯಾಲಯ, ಧಾರವಾಡ

೧೩. ಚನ್ನಕ ಯಲಿಗಾರ, ೧೯೭೭ ಮಾಸ್ತಿಕಲ್ಲು, ಧಾರವಾಡ

೧೪. ಪಂಚಮುಖಿ ಆರ್.ಎಸ್, ೧೯೮೧, ಕರ್ನಾಟಕ ಶಾಸನಗಳು, ಕ.ಸಂ.ಸಂಸ್ಥೆ, ಕನ್ನಡ ವಿಶ್ವವಿದ್ಯಾಲಯ, ಧಾರವಾಡ

೧೫. ಡಾ.ಎಂ.ಪಿ.ಮಂಜಪ್ಪಶೆಟ್ಟಿ, ೧೯೯೧, ಕರ್ನಾಟಕದಲ್ಲಿ ಅಶೋಕನ ಶಾಸನಗಳು ಮುಸಗಲಿ ಪ್ರಕಾಶನ, ಮೈಸೂರು

೧೬. ಡಾ.ನರಸಿಂಹಮೂರ್ತಿ ಎ.ವಿ, ೧೯೭೩, ಕರ್ನಾಟಕ ಶಾಸನ ಸಂಪುಟ, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು

೧೭. ಗೋಪಾಲರಾವ್ ಎಚ್.ಎಸ್, ಕಲ್ಯಾಣಚಲ, ಕನ್ನಡ ಭಾರತಿ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ Mythic Socity jents

೧೮. ಡಿ.ಎಸ್.ಅಶ್ವಥ್, ಕೊಪ್ಪಳ ಸಾಂಸ್ಕೃತಿಕ ಅಧ್ಯಯನ

೧೯. ಶೀಲಾಕಾಂತ ಪತ್ತಾರ, ೨೦೦೧, ಬಾದಾಮಿಯ ಸಾಂಸ್ಕೃತಿಕ ಅಧ್ಯಯನ

೨೦. ಭಾರತಿ ಅಳವಂಡಿ ಮಠ, ೧೯೯೮, ಬಾಗಳಿ ಶಾಸನಗಳು ಮತ್ತು ಸಂಸ್ಕೃತಿ

೨೧. ಶರಣಬಸಪ್ಪ ಪಿ, ೨೦೦೩, ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸ ಸಾಂಸ್ಕೃತಿಕ ೨೦೦೨

೨೨. ಕಪಟರಾಳ ಕೃಷ್ಣರಾಯರು, ೧೯೫೫, ಕರ್ನಾಟಕ ಲಾಕುಳ ಶೈವರ ಇತಿಹಾಸ ಕನ್ನಡ ಅಧ್ಯಯನ ಸಂಸ್ಥೆ, ಧಾರವಾಡ

೨೩. ಕಾಣೆ ಪಾಂಡುರಂಗ ವಾಮನ, ೧೯೮೦, ಧರ್ಮಶಾಸ್ತ್ರದ ಇತಿಹಾಸ, ಸಂ ೧, ಭಾಗ ೧, ಮೈಸೂರು

೨೪. ತಿಪ್ಪೆರುದ್ರಸ್ವಾಮಿ ಎಚ್, ೧೯೯೨, ಮರುಮುದ್ರಣ ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆಮೂರ್ತಿ, ಮೈಸೂರು

